

ನೀನಿರಲು ನಮಗೇತರ ಭಯವೋ
ಸನಕಾದಿಗಳ ಪ್ರಿಯ ತಿರುವೆಂಗಳಯ್ಯ

ಚರಣದಿಂದುದಿಸಿದವಳ ಸುತನ ಮೊಮ್ಮಗನ ಸತಿ
ಭರದಿಂದ ನಿಮ್ಮ ಸ್ತೋತ್ರವ ಮಾಡಲು
ಹರುಷದಿಂದ ಕೇಳಿ ನಲಿದೈವರ
ನಾರಿ ಲಜ್ಜೆಯ ಕಾಯಿದ ಕರುಣ ದಯಾಸಿಂಧು

ಕ್ಷುದೆಯಿಂದ ಬಂದ ಅಗಸ್ತ್ಯ ಮುನಿಶಾಪದಲಿ
ಮದಯುತನಾಗಿ ತಾನು ಗಜನಾಗಿರೆ
ಅಘಟಿತಾಗಿದ್ದ ನೆಗಳಿಗೆ ಸಿಲ್ಕಿ ಧೇನಿಸಲು
ನಿಜಚಕ್ರದಲಿ ಕಾಯಿದ ಗಜರಾಜವರದ

ನೀರ ದೊಬ್ಬುಳಿಯಂತೆ ನಿತ್ಯವಲ್ಲವೋ ದೇಹ
ಘೋರ ಸಂಸಾರದೊಳು ತೊಳಲಬೇಡ
ಶ್ರೀರಮಣ ಪುರಂದರ ವಿಠಲ ಪರದೈವವೆಂದು
ಸಾರುತಿರಲು ಮನವೆ ಸುಮ್ಮನಿರಲು ಬೇಡ

-ಶ್ರೀ ಪುರಂದರದಾಸರು



# ತಿರುಪತಿ ರೈಲುಗಳ ಆಗಮನ ನಿರ್ಗಮನಗಳು

ತಿರುಪತಿಗೆ ಬರುವ ಹಾಗೂ ತಿರುಪತಿಯಿಂದ ಹೊರಡುವ ರೈಲುಗಳ ಬ್ರಾಡ್‌ಗೇಜ್ ಹಾಗೂ ಮೀಟರ್‌ಗೇಜ್ ರೈಲುಗಳ ವಿವರಗಳನ್ನು ಇಲ್ಲಿ ಪಟ್ಟಿ ಮಾಡಲಾಗಿದೆ. ಪಾಠಕ ಯಾತ್ರಿಕರು ಗಮನಿಸಿ ತಮ್ಮ ಪ್ರಯಾಣವನ್ನು ಸುಖಕರ ಮಾಡಿಕೊಳ್ಳಬೇಕೆಂದು ಕೋರಲಾಗಿದೆ.

| ರೈಲು ವಿವರ | ತಿರುಪತಿ ಸೇರುವ ವೇಳೆ | ತಿರುಪತಿ ಬಿಡುವ ವೇಳೆ |
|---|---|---|
| | ಬ್ರಾಡ್‌ಗೇಜ್ | |
| ಕಾಕಿನಾಡ (ಪ್ಯಾಸೆಂಜರ್) | ಬೆಳಗ್ಗೆ 3-15 ಗಂಟೆಗೆ | ರಾತ್ರಿ 23-30 ಗಂಟೆಗೆ |
| ಮೈಸೂರು (ಪ್ಯಾಸೆಂಜರ್) | ಬೆಳಗ್ಗೆ 4-00 ಗಂಟೆಗೆ | ರಾತ್ರಿ 22-00 ಗಂಟೆಗೆ |
| ಸಿಕಂದರಾಬಾದ್ (ನಾರಾಯಣಾದ್ರಿ ಎಕ್ಸ್‌ಪ್ರೆಸ್) | ಬೆಳಗ್ಗೆ 6-25 ಗಂಟೆಗೆ | ಸಂಜೆ 18-30 ಗಂಟೆಗೆ |
| ವಿಶಾಖಪಟ್ನಂ (ತಿರುಮಲ ಎಕ್ಸ್‌ಪ್ರೆಸ್) | ಬೆಳಗ್ಗೆ 7-35 ಗಂಟೆಗೆ | ರಾತ್ರಿ 19-00 ಗಂಟೆಗೆ |
| ಹೈದರಾಬಾದು (ರಾಯಲಸೀಮೆ ಎಕ್ಸ್‌ಪ್ರೆಸ್) | ಬೆಳಗ್ಗೆ 9-05 ಗಂಟೆಗೆ | ಸಂಜೆ 15-30 ಗಂಟೆಗೆ |
| ಮದ್ರಾಸು (ಸಪ್ತಗಿರಿ ಎಕ್ಸ್‌ಪ್ರೆಸ್) | ಬೆಳಗ್ಗೆ 9-30 ಗಂಟೆಗೆ | ಬೆಳಗ್ಗೆ 10-05 ಗಂಟೆಗೆ |
| ಒಂಗೋಲು (ಪ್ಯಾಸಿಂಜರ್) | ಮಧ್ಯಾಹ್ನ 12-00 ಗಂಟೆಗೆ | ಮಧ್ಯಾಹ್ನ 14-15 ಗಂಟೆಗೆ |
| ಕೊಚ್ಚಿನ್ - ವಾರಣಾಸಿ (ವಾರಣಾಸಿ ಎಕ್ಸ್‌ಪ್ರೆಸ್) (ತಿರುಪತಿಯ ಮೂಲಕ ಮಂಗಳವಾರಗಳಲ್ಲಿ) | ಮಧ್ಯಾಹ್ನ 13-15 ಗಂಟೆಗೆ | ಮಧ್ಯಾಹ್ನ 13-45 ಗಂಟೆಗೆ (ಮಂಗಳವಾರ) |
| ವಾರಣಾಸಿ - ಕೊಚ್ಚಿನ್ (ಕೊಚ್ಚಿನ್ ಎಕ್ಸ್‌ಪ್ರೆಸ್) (ತಿರುಪತಿ ಮೂಲಕ ಭಾನುವಾರಗಳಲ್ಲಿ) | ಮಧ್ಯಾಹ್ನ 13-15 ಗಂಟೆಗೆ | ಮಧ್ಯಾಹ್ನ 13-45 ಗಂಟೆಗೆ (ಭಾನುವಾರ) |
| ವಾರಣಾಸಿ - ತಿರುಪತಿ (ವಾರಣಾಸಿ ಎಕ್ಸ್‌ಪ್ರೆಸ್) ಮಂಗಳವಾರ - ಭಾನುವಾರಗಳಲ್ಲಿ | ಮಧ್ಯಾಹ್ನ 13-20 ಗಂಟೆಗೆ | ಮಧ್ಯಾಹ್ನ 13-45 ಗಂಟೆಗೆ |
| ಪೂರಿ - ತಿರುಪತಿ (ಪೂರಿ ಎಕ್ಸ್‌ಪ್ರೆಸ್) ಬುಧ - ಶುಕ್ರವಾರಗಳಲ್ಲಿ | ಮಧ್ಯಾಹ್ನ 13-25 ಗಂಟೆಗೆ | ಬೆಳಗ್ಗೆ 9-45 ಗಂಟೆಗೆ |
| ಮದರಾಸು - ತಿರುಪತಿ (ಸಪ್ತಗಿರಿ ಎಕ್ಸ್‌ಪ್ರೆಸ್) | ಮಧ್ಯಾಹ್ನ 16-50 ಗಂಟೆಗೆ | ಸಂಜೆ 17-30 ಗಂಟೆಗೆ |
| ತಿರುಪತಿ - ಕಡಪ (ಇಂಟರ್‌ಸಿಟಿ ಎಕ್ಸ್‌ಪ್ರೆಸ್) | ರಾತ್ರಿ 20-15 ಗಂಟೆಗೆ | ಬೆಳಗ್ಗೆ 6-30 ಗಂಟೆಗೆ |
| ತಿರುಪತಿ - ಗೂಡೂರು (ಗೂಡೂರು ಪ್ಯಾಸೆಂಜರ್) | ರಾತ್ರಿ 20-30 ಗಂಟೆಗೆ | ಬೆಳಗ್ಗೆ 6-25 ಗಂಟೆಗೆ |
| ಹೈದರಾಬಾದು (ಕೃಷ್ಣಾ ಎಕ್ಸ್‌ಪ್ರೆಸ್) | ರಾತ್ರಿ 21-30 ಗಂಟೆಗೆ | ಬೆಳಗ್ಗೆ 5-30 ಗಂಟೆಗೆ |
| ಅರಕೋಣಂ ಅರಕೋಣಂ ಪ್ಯಾಸೆಂಜರ್ | ರಾತ್ರಿ 23-15 ಗಂಟೆಗೆ | ಬೆಳಗ್ಗೆ 4-05 ಗಂಟೆಗೆ |
| | ಮೀಟರ್ ಗೇಜ್ ರೈಲುಗಳು | |
| ಮಧುರೆ (ಮೀನಾಕ್ಷಿ ಎಕ್ಸ್‌ಪ್ರೆಸ್) | ಬೆಳಗ್ಗೆ 4-50 ಗಂಟೆಗೆ | ಮಧ್ಯಾಹ್ನ 15-40 ಗಂಟೆಗೆ |
| ಗುಂತಕಲ್ (ಗುಂತಕಲ್ ಪ್ಯಾಸೆಂಜರ್) | ಬೆಳಗ್ಗೆ 5-15 ಗಂಟೆಗೆ | ಬೆಳಗ್ಗೆ 6-00 ಗಂಟೆಗೆ |
| ಕಾಟ್ಪಾಡಿ (ಕಾಟ್ಪಾಡಿ ಪ್ಯಾಸೆಂಜರ್) | ಬೆಳಗ್ಗೆ 8-55 ಗಂಟೆಗೆ | ಬೆಳಗ್ಗೆ 10-30 ಗಂಟೆಗೆ |
| ಮಹಬೂಬ್ ನಗರ್ (ವೆಂಕಟಾದ್ರಿ ಎಕ್ಸ್‌ಪ್ರೆಸ್) | ಬೆಳಗ್ಗೆ 9-30 ಗಂಟೆಗೆ | ಬೆಳಗ್ಗೆ 14-40 ಗಂಟೆಗೆ |
| ಕಾಟ್ಪಾಡಿ (ಕಾಟ್ಪಾಡಿ ಪ್ಯಾಸೆಂಜರ್) | ಬೆಳಗ್ಗೆ 11-25 ಗಂಟೆಗೆ | ಸಂಜೆ 17-30 ಗಂಟೆಗೆ |
| ಕಾಟ್ಪಾಡಿ (ಕಾಟ್ಪಾಡಿ ಪ್ಯಾಸೆಂಜರ್) | ಮಧ್ಯಾಹ್ನ 14-35 ಗಂಟೆಗೆ | ಬೆಳಗ್ಗೆ 7-00 ಗಂಟೆಗೆ |
| ಗುಂತಕಲ್ (ಗುಂತಕಲ್) | ಸಂಜೆ 18-45 ಗಂಟೆಗೆ | ರಾತ್ರಿ 21-45 ಗಂಟೆಗೆ |
| ಕಾಟ್ಪಾಡಿ (ಕಾಟ್ಪಾಡಿ ಪ್ಯಾಸೆಂಜರ್) | ಸಂಜೆ 19-45 ಗಂಟೆಗೆ | ಬೆಳಗ್ಗೆ 2-45 ಗಂಟೆಗೆ |



ಸಪ್ತ



ಸಂಪುಟ -- 27 ಆಗಷ್ಟ್ 1996 ಸಂಚಿಕೆ --3

# ವಿಷಯಸೂಚಿ



ಮುಖ ಚಿತ್ರ: ಶ್ರೀ ಸುಂದರ ರಾಘವ ಪೆರುಮಾಳ್ (ಕಲ್ಲಳಗರ್) ಮಧುರೈ

ಒಂಬದಿಯಲ್ಲಿ: ಕೋಟಿಪಲ್ಲಿ ಶ್ರೀ ಸೋಮೇಶ್ವರಾಲಯ.

ಒಳಗಡೆ: 1) ಕಾರ್ವೇಟಿನಗರದ ಕೊಳ, ಆಲಯ, ಶ್ರೀ ವೇಣುಗೋಪಾಲ ಸ್ವಾಮಿ

2) ಹಯಗ್ರೀವರು.


ಗೌರವ ಸಂಪಾದಕರು :

ಎನ್. ರಮೇಶ್‌ಕುಮಾರ್ ಐ.ಎ.ಎಸ್.,

ಕಾರ್ಯನಿರ್ವಹಣಾಧಿಕಾರಿ,

ತಿ.ತಿ.ದೇ. ತಿರುಪತಿ.

ಸಂಪಾದಕ :

ಎನ್.ಎಸ್. ರಾಮಮೂರ್ತಿ, ಎಂ. ಎ.

ಉಪಸಂಪಾದಕ :

ಬಿ. ಎನ್. ಶ್ರೀನಿವಾಸನ್ ಎಂ. ಎ.,

ಮುದ್ರಣ :

ಎಂ. ಲಕ್ಷ್ಮಣರಾವ್ ಬಿ.ಎ., ಎಲ್.ಪಿ.ಟಿ.,

ಲೇಖನ/ಜಾಹೀರಾತುಗಳಿಗೆ

ಮಿಕ್ಕವಿವರಗಳಿಗೆ

ಸಂಪಾದಕರು,

ತಿರುಮಲೆ ತಿರುಪತಿ ದೇವಸ್ಥಾನಗಳು,

ತಿರುಪತಿ.

ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ ಎಲ್ಲ ತಿ.ತಿ.ದೇ. ವಿಚಾರಣಾಕೇಂದ್ರಗಳಲ್ಲಿ ದೊರೆಯುವುವು

ಬಿಡಿ ಪ್ರತಿ ೪--೦೦

ವಾರ್ಷಿಕ ಚಂದಾ ೪೮--೦೦



# ಸಂಪಾದಕೀಯ

ದಂಡಿನಲ್ಲಿ ಸೋದರಮಾವನೇ ಎಂಬ ಮಾತೊಂದಿದೆ. ಮಹಾಭಾರತದ ಸಮರಾಂಗಣದಲ್ಲಿ ಕರ್ಣನ ರಥಸಾರಥಿಯಾದ ಶಲ್ಯ ಮದ್ರರಾಜ - ಕರ್ಣಾವಸಾನದ ನಂತರ ಕೌರವ ಸೇನಾಸಾರಥಿಯಾಗಿ ದುರ್ಯೋಧನನಿಗೆ ವಿಜಯಲಕ್ಷ್ಮಿಯ ಸೂರೆಗಾಣಿಕೆ ಕೊಡುವ ಉದ್ದೇಶದಿಂದ ಮುದೆ ಬಂದಾಗ ಎದುರಾದವರು ಮಾದ್ರೀಕುಮಾರರು - ನಕುಲ ಸಹದೇವರು. ಸೋದರ ಸಂಬಂಧದ ಸಂಕಟ ಸಮರಾಂಗಣದಲ್ಲಿ ವ್ಯಾವರ್ಣಿತವಾಗಿಲ್ಲ, ಆದರೂ ಅದು ಇರಲೇ ಇಲ್ಲ ಎನ್ನುವ ಆಧಾರಗಳು ನಗಣ್ಯವಾಗಿ, ಓದುಗ ತನ್ನ ಅನುಭವ ಸೀಮೆಯಲ್ಲಿನ ಸಾಂದ್ರತೆಯಂತೆ ಸ್ಪಂದಿಸುವಲ್ಲಿ ಅಭ್ಯಂತರವಿರದು.

ಇದೊಂದು ಶುದ್ಧ ಲೌಕಿಕ ಜಗತ್ತು. ಮದ್ರೇಶನಿಗೆ ಕೌರವಾತಿಥ್ಯ, ಶಲ್ಯನ ಆಂತರಿಕ ಆದರ್ಶಗಳು ಹಾಗೂ ಮಾದ್ರೀ ಪುತ್ರರ ಸೋದರ ಸಂಬಂಧಗಳ ಘನಿಷ್ಠತೆಗಳಿಗೆ ಸೀಮಿತವಾದದ್ದು ಹಾಗಾಗಿ ಪರಿಸ್ಥಿತಿ ಹೇಗೇ ನಡೆವರೂ ಅವರ ಆಚೆಗೆ, ಒಟ್ಟು ಪ್ರಬಂಧದ್ವನಿಗೆ ಯಾವ ವಿಧವಾದ ಹೆಚ್ಚಿನ ಒತ್ತಡವೂ ಉಂಟಾಗದು ಎನ್ನಬರುತ್ತದೆ. ಇನ್ನೊಂದು ಸೋದರ ಸಂಬಂಧವಿದೆ, ಮಹಾಭಾರತವಲ್ಲಿ. ಅದು ಕೃಷ್ಣನಿಗೆ ಸಂಬಂಧಿಸಿದ್ದು. ಕಂಸ ಕೃಷ್ಣನಿಗೆ ತಾಯಿಮಾವ. ಹಾಗೆಯೇ ಅಭಿಮನ್ಯುವಿಗೆ ಕೃಷ್ಣ. ಉಗ್ರಸೇನನನ್ನು ಹಿಂದಿಕ್ಕಿ ಸಿಂಹಾಸನವನ್ನೇರಿದ ಕಂಸನ ದಬ್ಬಾಳಿಕೆಯ ಕೊನೆ ಆಗಬೇಕೆಂದು ಕೃಷ್ಣ ಅವತರಿಸುವ ಮೊದಲೇ ನಿರ್ಧಾರವಾದ ವಿಷಯ. ಕಂಸನಿಗೆ ಕೃಷ್ಣ ಗರ್ಭಶತ್ರುವಲ್ಲ - ಪರಿಕಲ್ಪನಾಶತ್ರು. ಇಂತಲ್ಲಿ ಸೋದರಿಕೆಯ ಸಂಬಂಧಕ್ಕೇನು ಬೆಲೆ. ಅಭಿಮನ್ಯುವಿನದು ಇನ್ನೊಂದು ರೀತಿಯ ಗರ್ಭಸಂಬಂಧ. ಸುಭದ್ರೆಯ ಗರ್ಭದಲ್ಲಿರುವಾಗಲೇ ಅವ ಕೃಷ್ಣನಿಂದ ಪದ್ಮವ್ಯೂಹ ಭೇದನವಿಧಾನವನ್ನು ತಿಳಿದವ. ಅಂತಹ ಸಂಬಂಧವಿದ್ದರೂ ಕೃಷ್ಣನ ಕಾರ್ಯಯೋಜನೆಯಲ್ಲಿ ಅವನಿಗೆ ನಿರ್ಗಮನವೇ ಮಾರ್ಗ. "ಕಾಯಿದರೆ ಕಲಿಯುಗಕೆ ಗತಿಯಿಲ್ಲ" ಎಂಬುದು ಕುಮಾರವ್ಯಾಸನ ಮಾತು. ಅಭಿಮನ್ಯು ಕುರುಕ್ಷೇತ್ರದಲ್ಲಿ ಉಳಿದುಬಿಟ್ಟರೆ ಕಲಿಯುಗದ ಆಗಮನವೇ ನಿಂತುಬಿಡುತ್ತದೆ ಎಂಬ ವಿರಾಟ್ ಕಾಲಚಕ್ರಗತಿಯ ಬಗ್ಗೆ ಕೃಷ್ಣನಿಗೆ ಯೋಚನೆ. ಆದ್ದರಿಂದಲೇ ಅಭಿಮನ್ಯು ರಂಗನಿಷ್ಕ್ರಮಣ ಮಾಡಬೇಕಾಯಿತು. ಹೀಗಾಗಿ ದಂಡಿನಲ್ಲಿ ಸೋದರ ಮಾವನೇ? ಎಂಬ ಮಾತಿಗೆ ಶಲ್ಯ ಸಹದೇವ ಸಂಬಂಧಕ್ಕಿಂತ, ಕಂಸ - ಕೃಷ್ಣ - ಅಭಿಮನ್ಯು ಸಂಬಂಧದಿಂದ ಹೆಚ್ಚಿನ ತೂಕ ಬರುತ್ತದೆ.

ಹಾಗೆ ನೋಡಿದರೆ ಇಡೀ ಮಹಾಭಾರತ ಸೋದರ ಸ್ಪರ್ಧೆಯ, ಸಮರದ ಕಥೆಯೆಂದರೂ ನಡೆಯುತ್ತದೆ. ಧರ್ಮ ಸಂಸ್ಥಾಪನೆಯ ಉದ್ದೇಶ ಹೊಂದಿದ ಕೃಷ್ಣನಿಗೆ ಎಲ್ಲವೂ ತನ್ನ ಧ್ಯೇಯದಲ್ಲಿ ನಿಮಿತ್ತ ಮಾತ್ರಗಳೇ. ಕಡೆಗೆ ಅಹವಮಲ್ಲ ಅರ್ಜುನನೂ ಒಂದು ನಿಮಿತ್ತ ಮಾತ್ರ. ಹಾಗೆಂದು ಅವನೇ ಖಚಿತವಾದ ಮಾತುಗಳಲ್ಲಿ ಹೇಳುತ್ತಾನೆ. ಸಂಧಿಯ ನೆವದಲಿ ಅವರ ಮನವನು ಗಟ್ಟಿಗೊಳಿಸಿ ಯುದ್ಧವನ್ನೇ ತರುವೆ ಎಂದು ಕೃಷ್ಣೆಗೆ ಸಮಾಧಾನ ನುಡಿಯುತ್ತ ಇವರು ಹಿಂಜರಿದರೆ ರಿಪುಗಳ ಸೀಳಿ ಕರುಳನ್ನು ಕಿತ್ತು ನಿನ್ನ ಕಬರಿಯಲ್ಲಿ ಮುಡಿಸುವೆ ಎಂಬ ಮಾತನ್ನು ಕೊಡುವಷ್ಟು ಮುಂದೆ ಹೋಗುವ ಮಹಾತ್ಮ ಆತ. ಎಂತಲೇ ಆತನನ್ನು ಸ್ಮರಿಸುವುದರಿಂದ ಕಷ್ಟಗಳು ತೊಲಗುತ್ತವೆಯೆಂಬುದು ವಿದುರ, ದ್ರೌಪದಿ, ಅರ್ಜುನ ಭೀಮರುಗಳ ಅನ್ನಿಸಿಕೆಯಾದರೆ ಅದು ಅತಿಶಯವೇನಲ್ಲ.

ಒಟ್ಟು - ಒಂದು ಮಹಾನ್ ಚೇತನ - ಇಲ್ಲಿ - ಈ ಭರತಭೂಮಿಯಲ್ಲಿ ಹುಟ್ಟಿ - ನಮ್ಮ ಕಾಲದಿಂದ ದೂರವಾದರೂ - ಪರಂಪರೆಯಿಂದ ಬಳಿಯವನೇ ಆಗಿ - ಬೆಳೆದ, ಎಂಬುದು ಮುಖ್ಯ. ಅಂತಹ ಕೃಷ್ಣನ ಜೀವನವನ್ನು ನೆನೆದುಕೊಳ್ಳುತ್ತ 'ಅವನು' ಮೆಚ್ಚುವಂತೆ ಬದುಕು ನಡೆಸಲು ಪ್ರಯತ್ನಿಸುವಂತಾದರೆ ಅಲ್ಲಿ ಸಾರ್ಥಕ್ಯವಿರುವುದು ಖಚಿತ.

- ಕೃಷ್ಣಂ ವಂದೇ ಜಗದ್ಗುರುಂ -

* * *

# ನಾಗಪಂಚಮೀ

---ಅನಂತ ಚಿಂತಾಮಣಿ ಜ್ಯೋತಿಷೀ.

ಚಾಂದ್ರಮಾಸದ ಐದನೆಯ ಮಾಸವಾದ ಶ್ರಾವಣ ಹಬ್ಬ ವ್ರತಪೂಜಾದಿಗಳ ಮಾಸವಾಗಿದೆ. ಈ ಶ್ರಾವಣದ ಶುಕ್ಲಪಕ್ಷದ ಐದನೆಯ ತಿಥಿಯು ನಾಗಪಂಚಮಿ ಎಂದು ಹೆಸರಾಗಿದೆ.

ನಾಗಪಂಚಮಿಯ ಸಮಯವಿಜ್ಞಾನವು ಇಂತಿದೆ. ಶ್ರಾವಣವು ವರ್ಷಾಋತುವಿನಲ್ಲಿ ಬರುತ್ತದೆ. ವರ್ಷಾಋತುವು ನಾಗಗಳಿಗೆ ಹೊರಬೀಳುವ ಸಮಯವಾಗಿದೆ. ವರ್ಷಾಕಾಲದಲ್ಲಿ ಬಿಲಗಳಲ್ಲಿ ನೀರು ತುಂಬಿರುವುದರಿಂದ ವಿವಶಗೊಂಡು ಅವು ಹೊರಗೆ ಬರುತ್ತವೆ. ಇದಕ್ಕಾಗಿ ಪ್ರತ್ಯಕ್ಷ ನಾಗಪೂಜನಕ್ಕೆ ಇದೇ ಸಮಯವು ಉಚಿತವಾಗಿದೆ. ನಾಗಜನಾಂಗವು ಅಂಧಕಾರ ಪ್ರಿಯವಾಗಿದೆ. ಶುಕ್ಲಪಕ್ಷದ ಪಂಚಮಿಯಂದು ಅಂಧಕಾರವೇ ಅಧಿಕವಾಗಿದೆ. ಪಂಚಮಿಯು ನಾಗಗಳ ತಿಥಿಯಾಗಿದೆ. ಶೇಷಾದೀನಾಂ ಫಣೀಶಾನಾಂ ಪಂಚಮ್ಯಾಂ ಪೂಜನಂ ಭವೇತ್ ಎಂದು ಧಾರೆಯಲ್ಲಿ ಅಗ್ನಿಪುರಾಣದ ವಚನ ವಿರುತ್ತದೆ. ಜ್ಯೋತಿಷ್ಯಶಾಸ್ತ್ರದನುಸಾರವಾಗಿ ಪಂಚಮಿ ತಿಥಿಯ ಸ್ವಾಮಿ ನಾಗ. ಶೇಷಮೊದಲಾದ ಸರ್ಪರಾಜರ ಪೂಜನವು ಪಂಚಮಿ ದಿನ ಆಗಬೇಕು.

ನಾಗಪಂಚಮಿ ವ್ರತಕಥೆಯು ಸ್ಕಾಂದಪುರಾಣದಲ್ಲಿ ವಿವೇಚಿಸಲ್ಪಟ್ಟಿದೆ. ಪುತ್ರ ಸಾಂಬನು ತಪಗೈದು ಸುಬ್ರಹ್ಮಣ್ಯನನ್ನು ಒಲಿಸಿಕೊಂಡನು. ಸುಬ್ರಹ್ಮಣ್ಯನು ಸಾಂಬನಿಗೆ ನಾಗಪಂಚಮಿ ವ್ರತಕಥೆಯನ್ನು ಹೇಳಿದ್ದು ಅದನ್ನು ಸೂತಪುರಾಣಿಕರು ಶೌನಕಾದಿ ಋಷಿಗಳಿಗೆ ವಿವರಿಸಿದ್ದು - ಅದು ಸಂಕ್ಷೇಪವಾಗಿ ಇಂತಿದೆ.

ಪಾಂಡ್ಯದೇಶದ ಬ್ರಾಹ್ಮಣನೊಬ್ಬನಿಗೆ ಸುಶೀಲೆ ಎಂಬ ಓರ್ವ ಮಗಳು ಹಾಗೂ ಎಂಟು ಜನ ಗಂಡುಮಕ್ಕಳಿದ್ದರು. ಗರುಡನಿಗೆ ಅಂಟಿದ ನಾಗರಹಾವು ಬಂದು ಆ ಬ್ರಾಹ್ಮಣನ ಮನೆಯಲ್ಲಿ ಆಸರೆ ಪಡೆದಳು. ಆ ಬ್ರಾಹ್ಮಣಕುಮಾರಿಯು ಹಾವಿಗೆ ಹಾಲನ್ನು ಕೊಟ್ಟು ಪಾಲಿಸುತ್ತಿದ್ದಳು. ಇದರಿಂದ ಆನಂದದ ಸಂತೃಪ್ತಿಯ ಆ ನಾಗರಹಾವು ಪ್ರತಿದಿನವೂ ಒಂದು ತೂಕದ ಚಿನ್ನವನ್ನು ತಂದು ಕೊಡಹತ್ತಿತು. ಇದರಿಂದ ಬ್ರಾಹ್ಮಣನ ಮನೆಯ ದಾರಿದ್ರ್ಯವು ದೂರವಾಗತೊಡಗಿತು. ಹಾವು ದಿನಾಲು ಒಂದು ತೂಕದಷ್ಟೇ ಬಂಗಾರ ಕೊಡುತ್ತದೆ. ಹೆಚ್ಚಿಗೆ ಕೊಡುವುದಿಲ್ಲ ಹೆಚ್ಚಿಗೆ ಬಂಗಾರ ಕೊಡು ಎಂದು ಹಾವನ್ನು ಕಾಲಿನಿಂದ ಆ ಬ್ರಾಹ್ಮಣಪುತ್ರನು ಮೆಟ್ಟಿದನು. ಇದರಿಂದ ಕ್ರುದ್ಧಗೊಂಡ ನಾಗರಹಾವು ಎಲ್ಲ ಬ್ರಾಹ್ಮಣ ಪುತ್ರರನ್ನೂ ಸಾಯಿಸಿತು. ತನ್ನ ಬಂಧುಗಳ ಮರಣವನ್ನು ನೋಡಿದ ಆ ಬ್ರಾಹ್ಮಣ ಕುಮಾರಿಯು ಆ ನಾಗರಹಾವಿನ ಹತ್ತಿರ ವಿಷಯವನ್ನು ಕೇಳಿದಳು. ಹಾವು ಅಲ್ಲಿಂದ ಹೊರಟಿತು. ತನ್ನ ತಂದೆಯ ಮನೆಗೆ ಏನೋ ಉಂಟಾಗಿದೆ. ಈಗ ತಾನೇನು ಮಾಡಲಿ ಎಂದು ಯೋಚಿಸುತ್ತಿರುವಾಗ ಒಂದು ಉಪಾಯವು ಹೊಳೆಯಿತು. ಶ್ರೀಮನ್ನಾರಾಯಣನನ್ನು ಶರಣು ಹೋಗುವುದೊಂದೇ ದಾರಿ ಎಂದು ಭಾವಿಸಿ ಶ್ರೀ ನಾರಾಯಣನನ್ನು ಭಯ ಭಕ್ತಿಯಿಂದ ಧ್ಯಾನಿಸಿದಳು. ದೇವನು ಪ್ರತ್ಯಕ್ಷನಾಗಲಿಲ್ಲ. ಕೊನೆಗೆ ನೀನು ಒಲಿಯದಿದ್ದರೆ ಈ ಶರೀರವನ್ನು ಅರ್ಪಿಸುತ್ತೇನೆ ಎಂದು ಖಡ್ಗದಿಂದ ಕುತ್ತಿಗೆಯನ್ನು ಕತ್ತರಿಸುವಾಗಲೇ ಶ್ರೀಮನ್ನಾರಾಯಣನು ಗರುಡವಾಹನವನ್ನೇರಿ ಪ್ರತ್ಯಕ್ಷನಾದನು. ಶ್ರೀಮನ್ನಾರಾಯಣನ ಹತ್ತಿರ ನಡೆದ ಸಂಗತಿ ತಿಳಿಸಿ ತಮ್ಮನ್ನು ರಕ್ಷಿಸುವಂತೆ ಶ್ರೀ ನಾರಾಯಣನಲ್ಲಿ ಬೇಡಿ ಅಂಗಲಾಚಿದಾಗ ನಾರಾಯಣನು ವಾಸುಕಿಯನ್ನು ಕರೆದು ಆ ಬ್ರಾಹ್ಮಣನ ಮಕ್ಕಳೆಲ್ಲರನ್ನು ಸಂಜೀವನ ರಸದಿಂದ ಬದುಕಿಸುವಂತೆ ಮತ್ತು ಬ್ರಾಹ್ಮಣಕನ್ಯೆಗೆ ವಿತ್ತವನ್ನು ಕೊಡಲು ಆದೇಶಿಸಿದನು. ವಾಸುಕಿಯು ಅವರುಗಳನ್ನು ಪುನಃ ಬದುಕಿಸಿದನು. ಶ್ರೀ ನಾರಾಯಣನು. ಈ ದಿನ ನಾಗಪಂಚಮಿಯಿದ್ದು ಈದಿನದಲ್ಲಿ ನಾಗಪೂಜೆಯನ್ನು ಮಾಡುವವರಿಗೆ ಸಂಪದವು ಸಂತಾನ ಭಾಗ್ಯ ಪ್ರಾಪ್ತಿಯಾಗುವುದು. ಅವರಿಗೆ ನಾಗಭಯ ಇರುವುದಿಲ್ಲ. ನಾಗರಿಗೆ ಮಾಡುವ ಪೂಜೆಯನ್ನು ಶ್ರೀ ನಾರಾಯಣನು ಸ್ವೀಕರಿಸುವನು ಎಂದು ತಿಳಿಸಿದನು. ನಾಗರಾಜನು ಆ ಬ್ರಾಹ್ಮಣಕನ್ಯೆಯ ಕೋರಿಕೆಯನ್ನು ಈಡೇರಿಸುತ್ತ ಆಕೆಯ ಕುಲದಲ್ಲಿ ಜನಿಸಿದವರಿಗೆ ವಿಷಪೀಡೆಯ ಹರಣ ಶಕ್ತಿಯನ್ನು ನೀಡಿದನಲ್ಲದೆ ನಾಗಜಾತಿಯಿಂದ ಅಭಯವನ್ನು ಕೊಟ್ಟನು. ಬ್ರಾಹ್ಮಣಪುತ್ರರು ತಮ್ಮನ್ನು ರಕ್ಷಿಸಿದ ಸೋದರಿಯನ್ನು ಕೊಂಡಾಡಿದರು. ಸರ್ವಶಕ್ತನಾದ ಭಗವಂತನು ತಾನು ಸ್ವತಃ ಬ್ರಾಹ್ಮಣಪುತ್ರರನ್ನು ಬದು



## ಮಾರಾಟಕ್ಕೆ ಸಿದ್ಧವಾಗಿರುವ ಪುಸ್ತಕಗಳು

**ಶ್ರೀ ವೇಂಕಟೇಶ ಸುಪ್ರಭಾತ**
ವ್ಯಾಖ್ಯಾನ ಸಹಿತ ಬೆಲೆ : 2-50

**ಗುರು ಶ್ರೀಶ ವಿಠಲದಾಸರ ಕೃತಿಗಳು**
ಸಂ - ಕೆ. ಅಪ್ಪಣ್ಣಾಚಾರ್ಯ ಬೆಲೆ : 6-00

**ದಾಸ ತತ್ತ್ವ ಪ್ರಕಾಶಿಕೆ**
ಸಂ - ಕೆ. ಅಪ್ಪಣ್ಣಾಚಾರ್ಯ ಬೆಲೆ : 10-00

**ಸ್ತೋತ್ರ ಕುಸುಮ ಮಾಲಾ**
ಸಂ - ಎಂ. ಎಸ್. ವೆಂಕಟಾಚಲಂ ಬೆಲೆ : 3-00

**ತ್ಯಾಗರಾಜ ಸ್ವಾಮಿ ಕೃತಿಗಳ ಹಲವು ಮುಖಗಳು**
-ಎನ್. ಎಸ್. ಮೂರ್ತಿ ಬೆಲೆ : 5-00

**ಭಕ್ತ ಪುರಂದರದಾಸರು**
-ಕೆ. ಅಪ್ಪಣ್ಣಾಚಾರ್ಯ ಬೆಲೆ : 2-60

**ಕರ್ನಾಟಕ ಹರಿದಾಸರು**
ತೆಲುಗು, ಹಿಂದಿ, ಆಂಗ್ಲ, ಕನ್ನಡ ಬೆಲೆ : 2-25

**ಶ್ರೀ ಶ್ರೀನಿವಾಸನ ಹಾಡುಗಳು**
(ಪ್ರಸನ್ನ ವೆಂಕಟದಾಸರು)
ಸಂ - ಕೆ. ಅಪ್ಪಣ್ಣಾಚಾರ್ಯ ಬೆಲೆ : 7-00

**ಶ್ರೀ ಪ್ರಸನ್ನ ವೆಂಕಟದಾಸರು**
- ವಿ. ಬಾದರಾಯಣ ಮೂರ್ತಿ ಬೆಲೆ : 0-80

**ಶ್ರೀ ಮಹಿಪತಿ ದಾಸರು**
- ದ. ನ. ಶಾನಭಾಗ ಬೆಲೆ : 0-85

ಅಂಚೆ ವೆಚ್ಚ ಪ್ರತ್ಯೇಕ. ಸಗಟು ಖರೀದಿಗೆ ಆಕರ್ಷಕ ಕಮಿಷನ್ ಉಂಟು. ಕೂಡಲೇ ಬರೆಯಿರಿ.

**ಸಂಪಾದಕರು**
ಪುಸ್ತಕ ಮಾರಾಟ ವಿಭಾಗ,
ಸಪ್ತಗಿರಿ, ತಿ.ತಿ.ದೇ., ತಿರುಪತಿ.

ಕಿಸದೇ ವಾಸುಕಿಯಿಂದಲೇ ಯಾಕೆ ಬದುಕಿಸಿದನು ಎಂಬ ಸಂಶಯ ವ್ಯಕ್ತಪಡಿಸಿದಾಗ ನಾಗರಲ್ಲಿ ತಪ್ಪು ಮಾಡಿ ಮೃತಪಟ್ಟವರನ್ನು ನಾಗರಿಂದಲೇ ಬದುಕಿಸುವುದು ಲೋಕ ಸಮ್ಮತವಾಗಿದೆ. ವಿಷ್ಣುವಿಗೆ ಆ ಸಾಮರ್ಥ್ಯ ಇಲ್ಲ ಎಂಬರ್ಥವಲ್ಲ ಎಂದು ಸಂಶಯವನ್ನು ನಿವಾರಿಸಿದನು. ನಾಗಭಕ್ತೆಯಾದ ಬ್ರಾಹ್ಮಣ ಕನ್ಯೆಗೆ ನಾಗಕೃಪೆ ಆಗಬೇಕಿತ್ತು. ಅದಕ್ಕಾಗಿ ನಾಗರಿಗೆ ಅಂದು ಪೂಜೆ ಸಲ್ಲಿಸುವ ಪ್ರಥೆಯಾಗಬೇಕು ಎಂದು ಭಗವಂತನು ನಿಯಮಿಸಿದ್ದಾನೆ. ಅಂದು ನಾಗಗಳನ್ನು ವಿಧಿಯುಕ್ತವಾಗಿ ಪೂಜಿಸಿದರೆ ಅಷ್ಟಕುಲ ನಾಗಾಧಿಪತಿಗಳ ಕೃಪಾಪ್ರಸಾದ ಪಡೆದುಕೊಳ್ಳಬಹುದಾಗಿದೆ. ನಾಗಪಂಚಮಿ ವ್ರತಕಥೆ ಶ್ರವಣ ಕಥನವು ಕೂಡ ಇಚ್ಛೆಗಳು ಪೂರ್ಣವಾಗುತ್ತದೆ.

ಇದೊಂದು ಕಥೆಯಾದರೆ ಇನ್ನು ಅನೇಕ ಕಥೆಗಳಿವೆ. ಪರೀಕ್ಷಿತ ಪುತ್ರ ಜನಮೇಜಯ ಮಹಾರಾಜನು ನಡೆಸಿದ ಸರ್ಪಯಾಗವನ್ನು ಸ್ಥಗಿತಗೊಳಿಸಿ ಮಹಾಭಾರತವನ್ನು ಶ್ರಾವಣಮಾಸದ ಶುದ್ಧ ಪಂಚಮಿ ದಿನದಿಂದ ಕೇಳತೊಡಗಿದನು.

ಇನ್ನೊಂದು ಕಥೆ ಇಂತಿದೆ. ಶ್ರೀಕೃಷ್ಣನು ಗೋಪ ಗೋಪಿಯರ ಜೊತೆಗೆ ಯಮುನಾ ತೀರದಲ್ಲಿ ಚೆಂಡಿನಾಟವನ್ನು ಆಡುತ್ತಿರುವಾಗ ಒಮ್ಮೆ ಆ ಚೆಂಡು ಯಮುನಾತೀರದ ಹತ್ತಿರವಿದ್ದ ಮರದ ಟೊಂಗೆಯೊಳಗೆ ಸಿಕ್ಕಿಕೊಂಡಿತು. ಚೆಂಡನ್ನು ತೆಗೆಯಲು ಶ್ರೀಕೃಷ್ಣನು ಮರವನ್ನೇರಿದಾಗ ಮರದ ಟೊಂಗೆಯು ತುಂಡಾಗಿ ಯಮುನೆಯೊಳಗೆ ಬಿದ್ದಿತು. ಟೊಂಗೆಯ ಸಹಿತ ಶ್ರೀಕೃಷ್ಣನು ಬಿದ್ದು ಬಿಟ್ಟನು. ಯಮುನೆಯ ನದಿಯಲ್ಲಿ ಕಾಲೀಯನೆಂಬ ವಿಷಸರ್ಪವಿದ್ದದ್ದರಿಂದ ಶ್ರೀಕೃಷ್ಣನು ಅದರೊಳಗೆ ಬಿದ್ದದ್ದು ಎಲ್ಲ ಜನರಿಗೆ ಚಿಂತೆಯಾಯಿತು. ಕೃಷ್ಣನು ಕಾಲೀಯನನ್ನು ಬಗ್ಗು ಬಡಿದು ಯಮುನೆಯನ್ನು ವಿಷಮುಕ್ತವನ್ನಾಗಿ ಮಾಡಿದನು. ಕಾಲೀಯನಾಗನ ಹೆಡೆಯ ಮೇಲೇರಿ ನಿಂತ ಶ್ರೀಕೃಷ್ಣನನ್ನು ಕಂಡು ಕಾಲೀಯನೇ ಶ್ರೀಕೃಷ್ಣನನ್ನು ಸಂರಕ್ಷಿಸಿದನು ಎಂದು ಗೋಕುಲ ನಿವಾಸಿಗರು ಭಾವಿಸಿದರು. ಅದಕ್ಕಾಗಿ ಗೋಕುಲನಿವಾಸಿಗರು ಕಾಲೀಯನಿಗೆ ಹಾಲು ಕುಡಿಸಿದರು. ಅಂದು ಶ್ರಾವಣ ಮಾಸದ ಶುದ್ಧ ಪಕ್ಷದ ಪಂಚಮಿ ತಿಥಿಯಾಗಿತ್ತು. ಅಂದಿನಿಂದ ನಾಗನಿಗೆ ಪೂಜೆ ಮಾಡಿ ಹಾಲು ನೀಡುವ ಪರಂಪರೆಯು ನಡೆದು ಬಂದಿತೆಂದು ಮನ್ನಿಸುತ್ತಾರೆ.

ಮಣಿಪುರ ಜನರ ನಾಗಪಂಚಮಿ ಕಥೆ ಎಲ್ಲರಿಗೆ ಚಿರಪರಿಚಿತ. ಅಂದು ಹೊಲವನ್ನು ಊಳುತ್ತಿರುವಾಗ ಹಾವಿನ ಮರಿಗಳು ಸತ್ತು ಹೋದುದಕ್ಕೆ ನಾಗಶಾಪ - ಮಗಳ ನಾಗಪೂಜೆಯಿಂದ ಎಲ್ಲವೂ ಜೀವಂತರಾಗಿ ವರಪಡೆದ ಈ ನಾಗಪಂಚಮಿ ಕಥೆ ಎಲ್ಲರಿಗೆ ಗೊತ್ತಿರುತ್ತದೆ.

ದ್ರಾವಿಡರು ಭರತಖಂಡದ ಮೂಲ ನಿವಾಸಿಗರಿದ್ದು ಇವರು ಕೂಡ ನಾಗಾರಾಧಕರಾಗಿರುತ್ತಾರೆ. ಅಲ್ಲದೆ ಹೊರಗಿನಿಂದ ಭಾರತಕ್ಕೆ ಬಂದ ಆರ್ಯರು ಕೂಡ ನಾಗದೇವತೆಯ ಪೂಜೆ ಅರ್ಚನೆಯನ್ನು ಎಲ್ಲೆಡೆಗೆ ಪ್ರಚಾರಗೊಳಿಸಿದರು. ಜೈನ - ಬೌದ್ಧರಲ್ಲಿ ಕೂಡ ನಾಗಪಂಚಮಿ ಹಬ್ಬದ ಆಚರಣೆಯಿರುತ್ತದೆ.

ನಾಗಪಂಚಮಿ ಹಬ್ಬವನ್ನು ಕೆಲವರು ನಾಲ್ಕು ದಿನ ಮೂರು ದಿನ ಎರಡು ದಿನ, ಒಂದುದಿನ - ಹೀಗೆ ಆಚರಣೆಯ ವಿಧಿಗಳನ್ನು ಆಚರಿಸುವರು. ನಾಲ್ಕು ದಿನದ ಹಬ್ಬವು ಶ್ರಾವಣ ಶುದ್ಧ ತದಿಗೆ ದಿನದಿಂದ ಆರಂಭವಾಗುತ್ತದೆ. ಅಂದಿನಿಂದ ಕುಟ್ಟುವುದು ಹೂಳುವುದು, ಬೀಸುವುದು ಅಗೆಯುವ ಕೆಲಸ ಮಾಡುವುದಿಲ್ಲ. ಈ ದಿನವು ರೊಟ್ಟಿಯ ಹಬ್ಬವೆಂದು ಹೆಸರಾಗಿದೆ. ಜೋಳ ಸಜ್ಜೆ ಗೋದಿ ರೊಟ್ಟಿ ವಿವಿಧ ಬಗೆಗಳ ಉಸುಳಿ ಪಲ್ಯ ಕೋಸುಂಬರಿಗಳನ್ನು ಮಾಡಿ ಮನೆದೇವರಿಗೆ ಪೂಜೆ ಮಾಡಿ ನೈವೇದ್ಯ ಅರ್ಪಿಸಿ ಪ್ರಸಾದ ರೂಪವಾಗಿ ಮನೆಯ ಜನರೆಲ್ಲರೂ ಸ್ವೀಕರಿಸುವರು.

ದ್ವಿತೀಯ ದಿವಸವೆಂದರೆ ಶ್ರಾವಣ ಶುಕ್ಲ ಚತುರ್ಥಿಯು ನಾಗಚತುರ್ಥಿಯಾಗಿದೆ. ಅಂದು ಮದುವೆಯಾದ ಹೆಣ್ಣುಮಕ್ಕಳು ತವರಿಗೆ ಬರುವರು. ತವರಿನವರು ಹೆಣ್ಣುಮಕ್ಕಳಿಗೆ ಸೀರೆ ಕುಪ್ಪುಸ ಮಂಗಳ ದ್ರವ್ಯ ಕೊಟ್ಟ ಸತ್ಕರಿಸುವರು. ಅಂದು ಬರದಿದ್ದರೆ ತಾಯಿಯ ಮನೆಯವರು ಕಾಣಿಕೆಯನ್ನು ಹೆಣ್ಣುಮಕ್ಕಳಿಗೆ ಕಳಿಸುವರು.

ಮೂರನೆಯ ದಿನ ಪಂಚಮಿ ಹಬ್ಬ. ಭಯ ಭಕ್ತಿಯಿಂದ ನಾಗಪೂಜೆಯನ್ನು ಮಾಡುವರು. ಹಾವಿನ ಹುತ್ತಕ್ಕೆ ಹಾಲು ಹಾಕುವ ಪದ್ಧತಿ.

ನಾಲ್ಕನೆಯ ದಿನ ಶಿರಿಯಾಳ ಷಷ್ಠೀ. ನಮ್ಮ ಹೊಲಗದ್ದೆಗಳನ್ನು ಹುಳುಹುಪ್ಪಡಿಗಳಿಂದ ರಕ್ಷಿಸಿದ ನಾಗರಹಾವನ್ನು ರೈತರು ಪೂಜಿಸುತ್ತಾರೆ.

ನಮ್ಮತ್ತ ಕಡೆ ನಾಗರಪಂಚಮಿ ದಿನದಂದು ನಾಗರ ಪೂಜೆ - ಬತ್ತ, ಧಾನ್ಯ ಅರಶು ಅರ್ಪಣೆ ಹಾಲನ್ನೆರೆಯುವಿಕೆ ಅರಿಶಿನ ಎರೆಯ ಮೇಲೆ ಕಾಯಿಹಣ್ಣಾದ ಹೋಳಿಗೆಯನ್ನು ನಾಗಪೂಜೆಯ ನೈವೇದ್ಯ ಅರ್ಪಿಸಿ ಪ್ರಸಾದ ರೂಪದಲ್ಲಿ ಸೇವಿಸುವೆವು.

ಈ ರೀತಿ ನಾನಾ ವಿಧಗಳಿಂದ ಆಚರಣೆ ಗೊಳ್ಳುತ್ತಿರುವ ನಾಗಪಂಚಮಿ ಹಬ್ಬವು ಜನಾಂಗದಲ್ಲಿ ಐಕ್ಯತೆ ಬಾಂಧವ್ಯತಾ ಬೆಳವಣಿಗೆಯನ್ನುಂಟುಮಾಡುತ್ತಿದೆ. ಕೃತಜ್ಞತಾಸೂಚಕವಾದ ಈ ನಾಗಪಂಚಮಿ ಹಬ್ಬವನ್ನು ಭರತಖಂಡದ ಎಲ್ಲೆಡೆಗೆ ವಿಶೇಷವಾಗಿ ಕರ್ನಾಟಕ ಬಂಗಾಲ ಮಹಾರಾಷ್ಟ್ರ ಉತ್ತರ ಪ್ರದೇಶ ಗುಜರಾತದಲ್ಲಿ ಆಚರಿಸುತ್ತಾರೆ.

*************

# ವೇದ, ವೇದಾಂಗಗಳು

—ವಿದ್ವಾನ್ 'ರಘುಸುತ'.

ಪ್ರಪಂಚದಲ್ಲಿ ಅತ್ಯಂತ ಪ್ರಾಚೀನ ಪರಂಪರೆಯನ್ನು ಹೊಂದಿರುವ ಧರ್ಮವೆಂದರೆ ಹಿಂದೂ ಧರ್ಮ. ಈ ಧರ್ಮವು ತನ್ನದೇ ಆದ ಶಾಸ್ತ್ರಪರಂಪರೆ, ಶಾಸ್ತ್ರಸಂಪತ್ತನ್ನು ಹೊಂದಿದೆ.

ಹಿಂದೂಧರ್ಮಶಾಸ್ತ್ರವು ತುಂಬ ವಿಸ್ತಾರವಾದುದು. ಈ ಧಾರ್ಮಿಕ ಗ್ರಂಥಗಳ ಬಹಳ ಹೆಚ್ಚಿನ ಭಾಗವು ವಿಧರ್ಮೀಯರ ಹಾಗೂ ಪರಕೀಯರ ಧಾಳಿಗೆ ಸಿಕ್ಕಿ ನಷ್ಟವಾಯಿತು. ಉಳಿದ ಬಹಳಷ್ಟು ಗ್ರಂಥಗಳು ಪ್ರಕೃತಿಯ ಪ್ರಕೋಪಕ್ಕೆ, ಜನರ ನಿರಂತರ ನಿರ್ಲಕ್ಷ್ಯಕ್ಕೆ ಕೀಟಗಳ ಧಾಳಿಗೆ ಸಿಕ್ಕಿ ಇನ್ನಷ್ಟು ನಾಶವಾಯಿತು. ಇವೆಲ್ಲವುಗಳಿಂದ ತಪ್ಪಿಸಿಕೊಂಡು ಉಳಿದಿರುವ ಅಲ್ಪಸ್ವಲ್ಪ ಪರಿಮಾಣವೇ ಅಪಾರ ಗ್ರಂಥರಾಶಿಯಾಗಿದೆ. ಇವುಗಳಲ್ಲಿಯೂ ಇನ್ನೂ ಅನೇಕ ಗ್ರಂಥಗಳು ಯಾರ ಯಾರ ಮನೆಗಳಲ್ಲಿಯೋ, ಕಗ್ಗತ್ತಲಿನಲ್ಲಿ ಸಿಕ್ಕಿಹಾಗಿಕೊಂಡಿವೆ. ಇವುಗಳು ಜನಸಾಮಾನ್ಯರ, ಪಂಡಿತರ ಕಣ್ಣಿಗೆ ಬಿದ್ದಿಲ್ಲ.

ಇಷ್ಟೆಲ್ಲ ಆದ ಮೇಲೂ ಪ್ರಕಟಣೆಗೊಂಡ, ಅವುಗಳ ಸೂಚಿಪತ್ರವನ್ನು ನೀಡಿದಲ್ಲಿ ಅದೇ ಒಂದು ಬೃಹತ್ ಗ್ರಂಥವಾದೀತು. ಅದರಿಂದ ಅದರ ಸಂಕ್ಷಿಪ್ತ ರೂಪವನ್ನಷ್ಟೇ ಇಲ್ಲಿ ನೀಡಲಾಗಿದೆ. ಹಿಂದೂ ಧರ್ಮದ ಆಧಾರಗ್ರಂಥಗಳು ಮುಖ್ಯವಾಗಿ ೧) ವೇದ, ೨) ವೇದಾಂಗ, ೩) ಉಪವೇದ, ೪) ಇತಿಹಾಸ, ೫) ಪುರಾಣ, ೬) ಸ್ಮೃತಿ, ೭) ದರ್ಶನ, ೮) ನಿಬಂಧ, ೯) ಆಗಮ, ಎಂಬುದಾಗಿವೆ.

## ೧. ವೇದ :

ವೇದದಲ್ಲಿ ಆರು ಭಾಗಗಳಿವೆ -- ೧) ಮಂತ್ರ ಸಂಹಿತೆ, ೨) ಬ್ರಾಹ್ಮಣಗ್ರಂಥ, ೩) ಆರಣ್ಯಕ, ೪) ಸೂತ್ರಗ್ರಂಥ, ೫) ಪ್ರಾತಿಶಾಖ್ಯ ೬) ಅನುಕ್ರಮಣೀ.

೧. ಮಂತ್ರಸಂಹಿತೆ : ವೇದಗಳು ನಾಲ್ಕು - ಋಗ್ವೇದ, ಯಜುರ್ವೇದ, ಸಾಮವೇದ ಹಾಗೂ ಅಥರ್ವವೇದ. ಇವು ವೇದದ ವಿಭಾಗಗಳು ಎಂದೆನಿಸಿಕೊಂಡಿವೆ. ಮೂಲತಃ ವೇದ ಎನ್ನುವುದು ಒಂದೇ. ಆದರೆ ಈ ವೇದದ ವಿಭಾಗಗಳನ್ನು ಮಾಡಿದವರೆಂದರೆ - ಕೃಷ್ಣದ್ವೈಪಾಯನ ವೇದವ್ಯಾಸರು.

ಯಜ್ಞಗಳಲ್ಲಿ ನಾಲ್ಕು ಮುಖ್ಯ ಋತ್ವಿಜರು ಇರುತ್ತಾರೆ. ಅವರು ಯಾರೆಂದರೆ - ಹೋತಾ, ಅಧ್ವರ್ಯು, ಉದ್ಗಾತಾ ಹಾಗೂ ಬ್ರಹ್ಮಾ

ಋಗ್ವೇದದ ಋತ್ವಿಜನನ್ನು 'ಹೋತಾ' ಎಂದೂ, ಯಜುರ್ವೇದದವನನ್ನು 'ಅಧ್ವರ್ಯು' ಎಂದೂ, ಸಾಮವೇದದವನನ್ನು 'ಉದ್ಗಾತ' ಎಂದೂ, ಅಥರ್ವವೇದದ ಋತ್ವಿಜನನ್ನು 'ಬ್ರಹ್ಮಾ' ಎಂದೂ ಕರೆಯುತ್ತಾರೆ.

ಇವರು ಕ್ರಮವಾಗಿ ನಾಲ್ಕು ದಿಕ್ಕುಗಳಲ್ಲಿ ಕುಳಿತುಕೊಳ್ಳುತ್ತಾರೆ.

ವೇದಗಳ ಮತ್ತೊಂದು ಹೆಸರು 'ತ್ರಯೀ' ಎಂಬುದು. ವೇದತ್ರಯದ ಅರ್ಥವೆಂದರೆ ಮೊದಲು ಪ್ರಧಾನವಾಗಿ ಮೂರೇ ವೇದಗಳು ಇದ್ದವು ಎಂಬುದು --

ಸ್ತ್ರಿಯಾಮೃಕ್ ಸಾಮಯಜುಷೀ
ಇತಿ ವೇದಾಸ್ತ್ರಯಸ್ತ್ರಯೀ (ಅಮರಕೋಶ 1-6-3)

ವೇದಗಳು ಅನಾದಿಯಾಗಿವೆ. ಅವುಗಳನ್ನು ಯಾರೂ ಸೃಷ್ಟಿಸಿದ್ದಲ್ಲ. ಅವು ಶಾಶ್ವತವಾದ ಈಶ್ವರೀಯ ಜ್ಞಾನವಾಗಿದೆ. ಸೃಷ್ಟಿಯ ಪ್ರಾರಂಭದಲ್ಲಿ ಇವನ್ನು ಪರಮಾತ್ಮನು ಬ್ರಹ್ಮನ ಹೃದಯದಲ್ಲಿ ಪ್ರಕಟಗೊಳಿಸಿದನು. ಪರಸ್ಪರರು ಆಲಿಸುವುದರಿಂದಲೇ ವೈದಿಕ ಮಂತ್ರಗಳ ಜ್ಞಾನ ಪ್ರಸಾರವಾಗುವುದು. ಆದುದರಿಂದಲೇ ಅವನ್ನು 'ಶ್ರುತಿ' ಎಂದು ಕರೆಯಲಾಗುವುದು.

ಈ ವೇದಮಂತ್ರಗಳಿಗೆ ನಿರ್ದಿಷ್ಟವಾದ ಛಂದಸ್ಸು, ಋಷಿ, ದೇವತೆಗಳು ಹಾಗೂ ವಿನಿಯೋಗಗಳಿವೆ. ಛಂದಸ್ಸಿನ ಮುಖಾಂತರ ಆ ಮಂತ್ರಗಳನ್ನು ಹೇಗೆ ಉಚ್ಚರಿಸಬೇಕು ಎಂಬುದು ಗೊತ್ತಾಗುತ್ತದೆ. ಆ ಮಂತ್ರಗಳ ಪೂರ್ತಿ ವ್ಯಾಖ್ಯಾನವು ನಿರುಕ್ತ ಅಥವಾ ವ್ಯಾಕರಣದಿಂದಷ್ಟೇ ಗೊತ್ತಾಗುವುದಿಲ್ಲ. ಯಾರು ಯಾವ ಮಂತ್ರದ ಪ್ರಭಾವವನ್ನು ತಪಸ್ಸಿನ ಮುಖಾಂತರ ಸಾಧನೆ ಮಾಡಿ, ಅರ್ಥದರ್ಶನ ಮಾಡಿಕೊಳ್ಳುವರೊ ಅದು ಆ ಮಂತ್ರದ ಋಷಿ ಎಂದಾಗುವರು. ಈ ರೀತಿಯಲ್ಲಿ ಋಷಿಯು ಮಂತ್ರದ್ರಷ್ಟಾರನಾಗುವನು.

ವೇದದ ಪ್ರತಿಯೊಂದು ಮಂತ್ರದ ಅನುಪೂರ್ವಿ ಇದ್ದು, ಅದು ನಿತ್ಯವಾಗಿರುತ್ತದೆ. ಮಂತ್ರಗಳ ಶಬ್ದಗಳಲ್ಲಿ ಯಾವುದೇ ಏರುಪೇರು ಇರುವುದಿಲ್ಲ. ಮಂತ್ರಗಳ ಸಂಕಲನ ಕ್ರಮದಲ್ಲಿ ಸ್ವಲ್ಪ ಬದಲಾವಣೆಗಳನ್ನು ಮಾಡಬಹುದಷ್ಟೆ. ಇದರಿಂದ ವೇದ ಪಾಠದಲ್ಲಿ ಅನೇಕ ಪ್ರಣಾಲಿಗಳಿವೆ. ಇವುಗಳನ್ನು ಕ್ರಮ, ಘನ, ಜಟಾ, ಶಿಖಾ, ರೇಖಾ, ಮಾಲಾ, ಧ್ವಜ, ದಂಡ ಹಾಗೂ ರಥ ಎಂದು ಕರೆಯುತ್ತೇವೆ.



# ಶ್ರೀ ಕಲ್ಯಾಣವೆಂಕಟೇಶ್ವರಸ್ವಾಮಿ ದೇವಾಲಯ ಶ್ರೀನಿವಾಸ ಮಂಗಾಪುರ

# ನೂತನ ಆರ್ಜಿತ ಸೇವೆಗಳು

ದಿನೇ ದಿನೇ ಹೆಚ್ಚುತ್ತಿರುವ ಭಕ್ತರ ಸಂದಣಿಯ ಅಪೇಕ್ಷೆಯಂತೆ ಶ್ರೀನಿವಾಸ ಮಂಗಾಪುರದ ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ದೇವಾಲಯದಲ್ಲಿ ಎರಡು ಹೊಸ ಸೇವೆಗಳನ್ನು ಪ್ರವೇಶಗೊಳಿಸಲಾಗಿದೆ. ಅವುಗಳೆಂದರೆ -

## 1. ಶ್ರೀನಿವಾಸ ಅರ್ಚನಾ ದತ್ತಿಯೋಜನೆ :

ಹತ್ತು ವರ್ಷ ಕಾಲ ರೂ. 5000/- ದತ್ತಿ ನೀಡುವವರ ಅಪೇಕ್ಷೆಯ ದಿನದಂದು ವರ್ಷಕ್ಕೆ ಒಮ್ಮೆ ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿಗೆ ಅರ್ಚನೆ ಮಾಡುವ ಅವಕಾಶ. ಈ ಹಣವನ್ನು ರಾಷ್ಟ್ರೀಕೃತ ಬ್ಯಾಂಕಿನಲ್ಲಿ ಠೇವಣಿಯಿಡಲಾಗುವುದು.

* ಈ ಸೇವೆಯಲ್ಲಿ ವ್ಯಕ್ತಿ, ಸಂಘ, ಸಂಸ್ಥೆಯ ಹೆಸರಿನಲ್ಲಿ ಅರ್ಚನೆ ನಡೆಸಬಹುದು.
* ದತ್ತಿ ನೀಡುವವರಿಗೆ ಅರ್ಚನೆಯ ದಿನವನ್ನು ನಿರ್ಧರಿಸುವ ಅವಕಾಶವಿದೆ.
* ದತ್ತಿ ನೀಡುವವರ ವರ್ಷಕ್ಕೆ ಒಮ್ಮೆ ಆಯ್ಕೆಯ ದಿನದಂದು ಅವರ ಕುಟುಂಬದ ಐದುಮಂದಿಗೆ ಅಷ್ಟೋತ್ತರ ಸಹಸ್ರನಾಮಾರ್ಚನೆಯ ವೇಳೆಯಲ್ಲಿ ಉಚಿತ ದರ್ಶನ ವುಂಟು.
* ಈ ಯೋಜನೆಯನ್ವಯ ದತ್ತಿ ನೀಡುವವರಿಗೆ ಒಂದು ಅಂಗವಸ್ತ್ರ, ಒಂದು ಕುಪ್ಪಸದ ಕಣದ ಬಹುಮಾನವುಂಟು.
* ಈ ದತ್ತಿಯನ್ವಯ ಅರ್ಚನಸೇವೆ ಹತ್ತು ವರ್ಷಕ್ಕೆ ಸೀಮಿತ.

## 2. ಅಭಿಷೇಕಾನಂತರ ವಸ್ತ್ರಾಲಂಕರಣ ಸೇವೆ :

ತಿರುಮಲೆಯಲ್ಲಿ ಶ್ರೀ ವೆಂಕಟೇಶ್ವರಸ್ವಾಮಿಯ ಶುಕ್ರವಾರಾಭಿಷೇಕದ ನಂತರ ವಸ್ತ್ರಾಲಂಕರಣಕ್ಕಾಗಿ ಭಕ್ತರು ವಸ್ತ್ರಕಾಣಿಕೆ ನೀಡುವುದು ಪದ್ಧತಿ. ಈ ದಿನಗಳಲ್ಲಿ ಹೆಚ್ಚಿರುವ ಯಾತ್ರಿಕ ಸಂದಣಿಯಿಂದಾಗಿ ಈ ವಸ್ತ್ರಕಾಣಿಕೆ ನೀಡಬಯಸುವ ಗೃಹಸ್ಥರು ಐದು ವರ್ಷಗಳಿಗೂ ಹೆಚ್ಚುಕಾಲ ಕಾಯಬೇಕಾಗುತ್ತದೆ. ಇಂತಹದೇ ವಸ್ತ್ರಕಾಣಿಕೆಯನ್ನು ಶ್ರೀನಿವಾಸ ಮಂಗಾಪುರದಲ್ಲೂ ಈಗ ಸ್ವೀಕರಿಸಲಾಗುವ ವಸ್ತ್ರಾಲಂಕರಣ ಸೇವೆಯನ್ನು ಪ್ರವೇಶಗೊಳಿಸಲಾಗಿದ.

* ಈ ಸೇವೆಯಲ್ಲಿ ತಿರುಮಲೆಯಲ್ಲಿಯಂತೆಯೇ ಪ್ರತಿ ಶುಕ್ರವಾರವೂ ಅಭಿಷೇಕಾನಂತರ ಸ್ವಾಮಿಗೆ ನೂತನ ಮೇಲ್ಚಾತ್ ಹಾಗೂ ಉತ್ತರೀಯ ದಿಂದ ಅಲಂಕರಣ ನಡೆಸಲಾಗುವುದು.
* ಭಕ್ತರಿಂದ ಈ ಸೇವೆಗಾಗಿ ವಸ್ತ್ರವನ್ನು (ಮೇಲ್ಚಾತ್ ಹಾಗೂ ಉತ್ತರೀಯ) ಅಥವಾ ಅದರ ಬೆಲೆ ರೂ. 15000/- ಸ್ವೀಕರಿಸಲಾಗುವುದು.
* ತಿರುಮಲೆಯಲ್ಲಿ ನಂತೆಯೇ ಭಕ್ತರ ಕಡೆಯ ಐದು ಮಂದಿಗೆ ಅಭಿಷೇಕ ದರ್ಶನದ ಏರ್ಪಾಡು ಮಾಡಲಾಗುವುದು.
* ಅಭಿಷೇಕಾನಂತರ ಗೃಹಸ್ಥರಿಗೆ ಒಂದು ಅಂಗವಸ್ತ್ರ ಹಾಗೂ ಒಂದು ಕುಪ್ಪಸದ ಕಣವನ್ನು ಬಹೂಕರಿಸಲಾಗುವುದು.

ಯಾತ್ರಿಕರು ಶ್ರೀನಿವಾಸ ಮಂಗಾಪುರದ ಶ್ರೀ ಕಲ್ಯಾಣವೆಂಕಟೇಶ್ವರಸ್ವಾಮಿಯ ಈ ಸೇವೆಗಳಲ್ಲಿ ಭಾಗವಹಿಸಿ ಅನುಕೂಲಗಳನ್ನು ಪಡೆಯಬಹುದಾಗಿದೆ.

**ತಿ.ತಿ.ದೇ.**

ವೇದಗಳ ಶಾಖೆಗಳು :

ತಮ್ಮ ಶಿಷ್ಯರಿಗೆ ಮಹರ್ಷಿಗಳು ತಮ್ಮ ಅ ಲಕ್ಕೆ ತಕ್ಕಂತೆ ವೇದ ಮಂತ್ರಗಳನ್ನು ಓದಿಸು ಯಾರೋ ಒಬ್ಬರು ಒಂದು ಛಂದಸ್ಸಿನ ಎಲ್ಲ ಗಳನ್ನೂ ಒಂದೇ ಸಮನಾಗಿ ಓದಿಸಿದರು. ಮ ಯವರು ಮಂತ್ರಗಳ ವಿಷಯ ಹಾಗೂ ಉಪ ಗಗಳಿಗೆ ಅನುಸಾರ ಜೋಡಿಸಿಟ್ಟರು. ಈ ಯಲ್ಲಿ 'ಸಂಪಾದನ - ಕ್ರಮ'ದಲ್ಲಿ ಒಂದು ವೆ ಅನೇಕ ಶಾಖೆಗಳು ಉಂಟಾದುವು.

ಋಗ್ವೇದದಲ್ಲಿ ೨೧ ಶಾಖೆಗಳಿವೆಯೆಂದು ತ್ತಾರೆ. ಇವುಗಳಲ್ಲಿ 'ಶಾಕಲಶಾಖಾ' ಎನ್ನು ಮಾತ್ರ ಶುದ್ಧರೂಪದಲ್ಲಿ ದೊರೆಯುವುದು.

ಯಜುರ್ವೇದದಲ್ಲಿ ಎರಡು ರೀತಿಯ ಪಾ ತರಗಳಿವೆ. ಒಂದನ್ನು ಶುಕ್ಲ ಯಜುರ್ವೇದವೆಂ ಮತ್ತೊಂದನ್ನು ಕೃಷ್ಣಯಜುರ್ವೇದವೆಂದೂ ಯುತ್ತಾರೆ.ಶುಕ್ಲಯಜುರ್ವೇದದಲ್ಲಿ ೧೫ ಹಾ ಕೃಷ್ಣಯಜುರ್ವೇದದಲ್ಲಿ ೮೬ ಶಾಖೆಗಳಿವೆ. ಗಳಲಲ್ಲಿ ಶುಕ್ಲ ಯಜುರ್ವೇದದ ಕಾಣ್ವ ಹಾ ಮಾಧ್ಯಂದಿನ ಶಾಖೆಗಳು ಮಾತ್ರ ಇವೆ. ಯಜುರ್ವೇದದ ತೈತ್ತರೀಯ, ಮೈತ್ರಾಯಣಿ, ಕಾಪಿಷ್ಠಲ ಹಾಗೂ ಶ್ವೇತಾಶ್ವತರ - ಈ ಐದು ಶಾ ಗಳು ಮಾತ್ರ ದೊರೆಯುತ್ತವೆ.

ಸಾಮವೇದದಲ್ಲಿ ಒಂದು ಸಹಸ್ರ ಶಾಖೆಗ ಯೆಂಬ ಉಲ್ಲೇಖವಿದೆ. ಅವುಗಳಲ್ಲಿ ಕೌಥುಮ ಜೈಮಿನೀಯ ಹಾಗೂ ರಾಣಾಯನೀಯ - ಎನ ಮೂರು ಮಾತ್ರ ಇವೆ. ಇವುಗಳಲ್ಲಿಯ ಕೌಥುಮಿಾ, ಜೈಮಿನೀಯಗಳು ಮಾತ್ರವೇ ಪೂ ರೂಪದಲ್ಲಿರುವುದು. ರಾಣಾಯಾನೀಯಾ ಎನ್ನು ದರ ಕೆಲವು ಅಂಶಗಳು ಮಾತ್ರ ಪ್ರಾಪ್ತವಾಗಿವೆ.

ಅಥರ್ವವೇದದ ಶಾಖೆಗಳಲ್ಲಿ ಈಗ ಪೈ ಲಾದೀ ಹಾಗೂ ಶೌನಕೀಯ ಶಾಖೆಗಳು ಮಾ ಶುದ್ಧರೂಪದಲ್ಲಿ ದೊರೆತಿವೆ.

### ೧. ಅ. ಬ್ರಾಹ್ಮಣ - ಗ್ರಂಥ

ವೇದಮಂತ್ರಗಳನ್ನು ಯಜ್ಞಗಳಲ್ಲಿ ಹೇಗೆ ಉ ಯೋಗಿಸುವರು ಎಂಬುದನ್ನು ಬ್ರಾಹ್ಮಣಗಳಲ್ಲಿ ತಿ ಸಲಾಗಿದೆ.

ಈಗ ದೊರೆತಿರುವ ಬ್ರಾಹ್ಮಣಗಳೆಂದರೆ-

ಋಗ್ವೇದ : ಐತ್ತರೀಯ ಬ್ರಾಹ್ಮಣ ಮತ್ತು ಶಂಖಾ ಯನ ಬ್ರಾಹ್ಮಣ (ಅಥವಾ ಕೌಷೀತಕೀ ಬ್ರಾಹ್ಮಣ)

ಕೃಷ್ಣಯಜುರ್ವೇದ : ತೈತ್ತರೀಯ ಬ್ರಾಹ್ಮಣ ಹಾಗೂ ತೈತ್ತರೀಯ ಸಂಹಿತೆಯ ಮಧ್ಯವರ್ತೀ ಬ್ರಾಹ್ಮಣ.

ಶುಕ್ಲ ಯಜುರ್ವೇದ : ಶತಪಥ ಬ್ರಾಹ್ಮಣ (ಇದೂ ಎರಡು ಭಾಗಗಳಲ್ಲಿವೆ - ಕಣ್ವಶಾಖೆಯದು ೧೭ ಕಾಂಡಗಳಲ್ಲಿದೆ ಹಾಗೂ ಮಾಧ್ಯಂದಿನ ಶಾಖೆಯು ೧೪ ಕಾಂಡಗಳಲ್ಲಿದೆ.

ಸಾಮವೇದ : ೧ - ತಾಂಡ್ಯ (ಪಂಚವಿಂಶ) ಬ್ರಾಹ್ಮಣ, ೨ - ಷಡ್ವಿಂಶ ಬ್ರಾಹ್ಮಣ, ೩ - ಸಾಮವಿಧಾನ ಬ್ರಾಹ್ಮಣ, ೪ - ಆರ್ಷೇಯ ಬ್ರಾಹ್ಮಣ, ೫ - ಮಂತ್ರ ಬ್ರಾಹ್ಮಣ, ೬ - ದೈವತಾಧ್ಯಾಯ ಬ್ರಾಹ್ಮಣ, ೭ - ವಂಶ ಬ್ರಾಹ್ಮಣ, ೮ - ಸಂಹಿತೋಪನಿಷದ್ ಬ್ರಾಹ್ಮಣ, ೯ - ಜೈಮಿನೀಯ ಬ್ರಾಹ್ಮಣ ಹಾಗೂ ೧೦ - ಜೈಮಿನೀಯ ಉಪನಿಷದ್ ಬ್ರಾಹ್ಮಣ.

ಅಥರ್ವವೇದ : ಗೋಪಥ ಬ್ರಾಹ್ಮಣ.

### ೧. ಆ. ಆರಣ್ಯಕ ಹಾಗೂ ಉಪನಿಷತ್ತು

ಬ್ರಾಹ್ಮಣಗಳಲ್ಲಿ ಕೆಲವು ಭಾಗಗಳು ಅರಣ್ಯಗಳಲ್ಲಿ ಪಠಿಸಲು ಯೋಗ್ಯವಾದವುಗಳು. ಆದರಿಂದ ಅವುಗಳ ಹೆಸರು 'ಆರಣ್ಯಕ'ಗಳು ಎಂದಾದುವು.

ಪ್ರಸ್ತುತ ೨೭೫ ಉಪನಿಷತ್ತುಗಳು ಲೆಕ್ಕಕ್ಕೆ ಸಿಕ್ಕಿವೆ. ಇವುಗಳಲ್ಲಿ ೧೩ ಉಪನಿಷತ್ತುಗಳು ಮುಖ್ಯವಾದುವು. ಅವು ಯಾವುವೆಂದರೆ - ಈಶ, ಕೇನ, ಕಠ, ಮುಂಡಕ, ಮಾಂಡೂಕ್ಯ ಪ್ರಶ್ನ, ಐತರೇಯ, ತೈತ್ತಿರೀಯ, ಛಾಂದೋಗ್ಯ, ಬೃಹದಾರಣ್ಯಕ, ಶ್ವೇತಾಶ್ವತರ, ಕೌಷೀತಕೀ ಹಾಗೂ ನೃಸಿಂಹತಾಪಿನೀ, ಇವುಗಳಲ್ಲಿ ಈಶಾವಾಸ್ಯೋಪನಿಷತ್ ಯಜುರ್ವೇದದ ಮೂಲ ಸಂಹಿತೆಯಲ್ಲಿದೆ.

### ೧. ಇ. ಸೂತ್ರಗ್ರಂಥಗಳು

ವೇದಗಳಲ್ಲಿನ ಸೂತ್ರ ಭಾಗವು ಮೂರು ಪ್ರಕಾರಗಳಲ್ಲಿವೆ - ಶ್ರೌತ ಸೂತ್ರ, ಗೃಹ್ಯಸೂತ್ರ ಹಾಗೂ ಧರ್ಮಸೂತ್ರ.

೧) ಶ್ರೌತಸೂತ್ರ: ಶ್ರೌತಸೂತ್ರದಲ್ಲಿ ಮಂತ್ರ ಸಂಹಿತೆಯ ಕರ್ಮಕಾಂಡವನ್ನು ವಿವರಿಸಲಾಗಿದೆ. ಪ್ರಸ್ತುತ ಈ ಕೆಳಗೆ ತಿಳಿಸಿರುವ ಶ್ರೌತಸೂತ್ರಗಳು ಉಪಲಬ್ಧವಿವೆ-

ಋಗ್ವೇದ : ಅಶ್ವಲಾಯನ, ಶಂಖಾಯನ ಶ್ರೌತ ಸೂತ್ರ.

ಕೃಷ್ಣಯಜುರ್ವೇದ : ಆಪಸ್ತಂಬ ಶ್ರೌತ ಸೂತ್ರ, ಹಿರಣ್ಯಕೇಶೀಯ (ಸತ್ಯಾಷಾಢ) ಶ್ರೌತ ಸೂತ್ರ, ಬೌಧಾಯನ ಶ್ರೌತಸೂತ್ರ, ಭಾರದ್ವಾಜ, ವೈಖಾನಸ, ವಾಧೂಲ, ಮಾನವ ಹಾಗೂ ವಾರಾಹಶ್ರೌತಸೂತ್ರಗಳು.

ಶುಕ್ಲಯಜುರ್ವೇದ : ಕಾತ್ಯಾಯನ (ಪಾರಸ್ಕರ) ಶ್ರೌತಸೂತ್ರ.

ಸಾಮವೇದ : ಮಶಕಸೂತ್ರ, ಲಾಟ್ಯಾಯನ ಸೂತ್ರ, ದ್ರಾಹ್ಯಾಯಣ ಸೂತ್ರ ಹಾಗೂ ಖಾದಿರ ಇತ್ಯಾದಿ ಶ್ರೌತಸೂತ್ರಗಳು.

ಅಥರ್ವವೇದ: ಇದರಲ್ಲಿ ಕೇವಲ ವೈತಾನ ಶ್ರೌತ ಸೂತ್ರ ಮಾತ್ರ ಲಭ್ಯವಿದೆ.

೨) ಗೃಹ್ಯಸೂತ್ರ ಹಾಗೂ ಧರ್ಮಸೂತ್ರಗಳು :

ಶ್ರೌತಸೂತ್ರಗಳು ಹೇಗೆ ನಾಲ್ಕೂ ವೇದಗಳಲ್ಲಿ ಕಾಣಸಿಗುವುದೊ ಹಾಗೆಯೇ ಗೃಹ್ಯಸೂತ್ರ, ಧರ್ಮಸೂತ್ರ ಹಾಗೂ ಶುಲ್ಬ ಸೂತ್ರಗಳೂ ಕೂಡ ನಾಲ್ಕೂ ವೇದಗಳಲ್ಲಿ ಕಾಣಸಿಗುತ್ತದೆ.

ಧರ್ಮ ಸೂತ್ರಗಳಲ್ಲಿ ಧರ್ಮಾಚರಣೆಯ ವರ್ಣನೆಯು ಇರುತ್ತದೆ. ಗೃಹ್ಯಸೂತ್ರಗಳಲ್ಲಿ ಕುಲಾಚಾರದ ವರ್ಣನೆ ಇರುತ್ತದೆ.

ಋಗ್ವೇದ : ಆಶ್ವಲಾಯನ ಗೃಹ್ಯಸೂತ್ರ ಹಾಗೂ ಶಂಖಾಯನ ಗೃಹ್ಯಸೂತ್ರಗಳು ಇದರಲ್ಲಿವೆ. ಇದರಲ್ಲಿ ವಸಿಷ್ಠ ಧರ್ಮ ಸೂತ್ರವೂ ಇದೆ. ಇವರ ಬಗ್ಗೆ ಸಂಸ್ಕೃತದಲ್ಲಿ ಅನೇಕ ಟೀಕೆಗಳು ಇವೆ.

ಕೃಷ್ಣಯಜುರ್ವೇದ : ಇದರಲ್ಲಿ ಮಾನವ ಗೃಹ್ಯ ಸೂತ್ರ, ಕಾಠಕ ಗೃಹ್ಯ ಸೂತ್ರ, ಆಪಸ್ತಂಬ ಗೃಹ್ಯಸೂತ್ರ, ಬೌಧಾಯನ ಗೃಹ್ಯಸೂತ್ರ, ವೈಖಾನಸ ಗೃಹ್ಯಸೂತ್ರ ಹಾಗೂ ಹಿರಣ್ಯಕೇಶೀಯ ಗೃಹ್ಯಸೂತ್ರಗಳಿವೆ. ಇವೇ ಹೆಸರಿನ ಧರ್ಮಸೂತ್ರಗಳೂ ಇವೆ.

ಶುಕ್ಲ ಯಜುರ್ವೇದ : ಇದರಲ್ಲಿ ಪಾರಸ್ಕರ ಗೃಹ್ಯ ಸೂತ್ರ ಹಾಗೂ ಕಾತ್ಯಾಯನ ಗೃಹ್ಯ ಸೂತ್ರಗಳಿವೆ. ಪಾರಸ್ಕರ ಗೃಹ್ಯಸೂತ್ರಗಳ ಮೇಲೆ ಕರ್ಕ, ಜಯರಾಮ, ಗದಾಧರ ಇತ್ಯಾದಿ ಏಳು ಸಂಸ್ಕೃತ ಟೀಕೆಗಳಿವೆ. ಈ ವೇದಕ್ಕೆ ಸಂಬಂಧಪಟ್ಟ ಹಾಗೆ ವಿಷ್ಣು - ಧರ್ಮ ಸೂತ್ರವಿದೆ.

ಸಾಮವೇದ : ಇದರಲ್ಲಿ ಜೈಮಿನೀಯ, ಗೋಭಿಲ, ಖಾದಿರ, ದ್ರಾಹ್ಯಾಯಣ - ಎನ್ನುವ ನಾಲ್ಕು ರೀತಿಯ ಗೃಹ್ಯಸೂತ್ರಗಳಿವೆ.

ಇದರಲ್ಲಿ ಗೌತಮಧರ್ಮಸೂತ್ರಗಳಿವೆ. ಇವರ ಮೇಲೆ ಮಸ್ಕರಿ ಭಾಷ್ಯ ಹಾಗೂ ಮಿತಾಕ್ಷರಾವೃತ್ತಿ ವ್ಯಾಖ್ಯಾನಗಳಿವೆ. ಇವಲ್ಲದೆ ಛಾಂದೋಗ ಪರಿಶಿಷ್ಟ ಇದೆ.

ಅಥರ್ವವೇದ : ಇದರಲ್ಲಿ ಕೌಶಿಕ, ವಾರಾಹ ಹಾಗೂ ವೈಖಾನಸ ಗೃಹ್ಯಸೂತ್ರಗಳಿವೆ. ಆದರೆ ಇದರ ಬಗ್ಗೆ ಯಾವುದೇ ಧರ್ಮಸೂತ್ರ ಇದುವರೆಗೆ ದೊರೆತಿಲ್ಲ.

### ೧. ಈ. ಪ್ರಾತಿ ಶಾಖ್ಯ

ಪ್ರಾತಿಶಾಖ್ಯ ಎನ್ನುವುದು ಒಂದು ರೀತಿಯ ವೈದಿಕ ವ್ಯಾಕರಣವಾಗಿದೆ. ಇದು ನಾಲ್ಕು ವೇದಗಳಲ್ಲಿ ದೊರೆಯುತ್ತದೆ. ಕಾತ್ಯಾಯನ ಶುಲ್ಬಸೂತ್ರವು ಯಜುರ್ವೇದದ ಶುಲ್ಬ ಸೂತ್ರಗಳಲ್ಲಿ ಪ್ರಧಾನವಾದುದು. ಇದರಲ್ಲಿ ರೇಖಾಶಾಸ್ತ್ರದ ವಿಸ್ತಾರವಾದ ವರ್ಣನೆ ಇದೆ. ಇದರಲ್ಲಿ ಭೌತಿಕ ವಿಜ್ಞಾನದ ವರ್ಣನೆ ಇರುವ ವಿಭಾಗವು ಲುಪ್ತವಾಗಿ, ಅದಿಲ್ಲದೆ ವೈದಿಕ ಭೌತ ವಿಜ್ಞಾನವು ಅತಂತ್ರದಲ್ಲಿದೆ.

### ೧. ಉ. ಅನುಕ್ರಮಣೀ

ವೇದಗಳ ರಕ್ಷಣೆ ಹಾಗೂ ವೇದಾರ್ಥಗಳ ರಕ್ಷಣೆಯನ್ನು ಈ ಗ್ರಂಥಗಳು ಮಾಡುತ್ತವೆ.

ಋಗ್ವೇದ : ೧ - ಆರ್ಷಾನುಕ್ರಮಣೀ - ಇದರಲ್ಲಿ ಮಂತ್ರಕ್ರಮದಿಂದ ಪ್ರಾರಂಭವಾಗುವ ಋಷಿಗಳ ಹೆಸರುಗಳಿವೆ, ೨ - ಛಾಂದೋಽನು ಕ್ರಮಿಣೀ, ೩ - ದೇವಾನುಕ್ರಮಿಣೀ, ೪ - ಅನುವಾಕಾನು ಕ್ರಮಿಣೀ, ೫ - ಸರ್ವಾನುಕ್ರಮಿಣೀ, ೬ - ಬೃಹದ್ದೈವತ, ೭ - ಋಗ್ವಿಜ್ಞಾನ, ೮ - ಬಹ್ವಚ್ ಪರಿಶಿಷ್ಟ, ೯ - ಶಾಂಖಾಯನ - ಪರಿಶಿಷ್ಟ, ೧೦ - ಆಶ್ವಲಾಯನ ಪರಿಶಿಷ್ಟ ಹಾಗೂ ೧೧ - ಋಕ್ ಪ್ರಾತಿ ಶಾಖ್ಯಗಳು ಲಭ್ಯವಿದೆ.

ಕೃಷ್ಣ ಯಜುರ್ವೇದ : ಇದರಲ್ಲಿ ಆತ್ರೇಯಾನುಕ್ರಮಿಣೀ, ಚಾರಾಯಣೀಯಾನುಕ್ರಮಿಣೀ ಹಾಗೂ ತೈತ್ತರೀಯ ಪ್ರಾತಿಶಾಖ್ಯಗಳು ಇವೆ.

ಶುಕ್ಲಯಜುರ್ವೇದ: ಇವರ ಪ್ರಾತಿ ಶಾಖ್ಯ ಸೂತ್ರ ಹಾಗೂ ಕಾತ್ಯಾಯಾನುಕ್ರಮಿಣೀಗಳು ಲಭ್ಯವಿವೆ.

ಕೃಷ್ಣಯಜುರ್ವೇದ : ಇದರಲ್ಲಿ ಆತ್ರೇಯಾನುಕ್ರಮಿಣೀ, ಚಾರಾಯಣೀ ಯಾನುಕ್ರಮಣೀ ಹಾಗೂ ತೈತ್ತರೀಯ ಪ್ರಾತಿಶಾಖ್ಯಗಳು ಇವೆ.

ಶುಕ್ಲಯಜುರ್ವೇದ: ಇವರ ಪ್ರಾತಿ ಶಾಖ್ಯ ಸೂತ್ರ ಹಾಗೂ ಕಾತ್ಯಾಯಾನು ಕ್ರಮಿಣೀಗಳು ಲಭ್ಯವಿವೆ.

### ೨. ವೇದಾಂಗ

ವೇದಗಳಿಗೆ ಆರು ಅಂಗಗಳಿವೆಯೆಂದು ನಂಬಲಾಗಿದೆ. ಈ ಅಂಗಗಳಿಲ್ಲದೆ ವೈದಿಕ ಜ್ಞಾನವು ಅಪೂ



## ಶ್ರೀ ವೆಂಕಟೇಶ್ವರ ಕೇಂದ್ರ ಗ್ರಂಥಾಲಯ
## ಸಂಶೋಧನ ಕೇಂದ್ರ -- ತಿರುಪತಿ

# ಒಂದು ವಿನಂತಿ

1993 ರಲ್ಲಿ ತಿ.ತಿ.ದೇ. ಆಡಳಿತ ಮಂಡಳಿಯ ವಜ್ರಮಹೋತ್ಸವ ವರ್ಷದಲ್ಲಿ ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ, ಸಂಶೋಧನ ಕೇಂದ್ರ ವನ್ನು ನೆಲೆಗೊಳಿಸಿ ಅದನ್ನು ಸ್ವಾಮಿ ಭಕ್ತರ ಸೇವೆಯಲ್ಲಿ ಸಮರ್ಪಿಸಲಾಯಿತು. ನಮ್ಮ ಪರಂಪರೆಯ ವಾಸ್ತು ಶಿಲ್ಪದ ಹಾಗೂ, ಆಧುನಿಕ ವಾಸ್ತು ಶಾಸ್ತ್ರದ ಉತ್ತಮಾಂಶಗಳನ್ನು ಒಳಗೊಂಡು ನಿಂತಿರುವ ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ ಅಪೂರ್ವ ಪುಸ್ತಕಾಗಾರವಾಗಿ ವೇದೋಪನಿಷತ್ತುಗಳ, ಇತಿಹಾಸ ಪುರಾಣಗಳ, ಶಾಸ್ತ್ರ ಭಗವದ್ಗೀತೆಗಳ ಉಪಾದೇಯವೂ ಭವ್ಯವೂ ಆದ ಸಂದೇಶವನ್ನು ಪ್ರಸಾರಮಾಡುವ ಉದ್ದೇಶ ಹೊಂದಿದೆ.

ಸನಾತನ ಧರ್ಮದ ವೈವಿಧ್ಯಮಯ ಮುಖಗಳ, ಭಾರತೀಯ ಚಿಂತನ ಶೀಲತೆಯ, ತತ್ವ, ಧರ್ಮ, ಸಂಗೀತವೇ ಮೊದಲಾದ ಪರಂಪರಾಗತ ಸಂಪದ್ಭರಿತ ಸಂಸ್ಕೃತಿಯಲ್ಲಿ ಸಂಶೋಧನೆ ನಡೆಸಲು ಅವಕಾಶವನ್ನು ಶ್ರೀ ವೆಂಕಟೇಶ್ವರಕೇಂದ್ರಗ್ರಂಥಾಲಯ ಕಲ್ಪಿಸುವುದು. ಭಾರತೀಯ ಶಾಸ್ತ್ರದ ಬಗ್ಗೆ ಅಪರೂಪವೂ, ಅಮುದ್ರಿತವೂ ಆದ ಅಂಶಗಳನ್ನು ಪ್ರಕಟಿಸುವುದೂ, ಸಂಸ್ಕೃತ ಪಾಠಗಳ ಮೂಲ ಪ್ರತಿಗಳನ್ನೂ ಅವುಗಳ ಸರಳಾನುವಾದಗಳನ್ನೂ ಪ್ರಕಟಿಸುವುದೂ, ನಮ್ಮ ಉದ್ದೇಶವಾಗಿದೆ. ಈ ಪುಸ್ತಕ ಭಂಡಾರವು ಭಾರತೀಯ ಸಂಸ್ಕೃತಿಯ ದೇವಾಲಯವಾಗಿ, ಶಿಕ್ಷಣ, ಸಂಶೋಧನೆಯ ಮಹತ್ ಸಂಸ್ಥೆಯನ್ನಾಗಿ ಮಾಡುವುದೇ ನಮ್ಮ ಪವಿತ್ರತಮ ಕರ್ತವ್ಯವಾಗಿದೆ. ಇಡೀ ಯೋಜನೆ ಸಾಕಷ್ಟು ಸಂಪನ್ಮೂಲವನ್ನು ಅಪೇಕ್ಷಿಸುತ್ತದೆ.

ಹೀಗಾಗಿ, ಸಾರ್ವಜನಿಕರಲ್ಲಿ, ಸ್ವಯಂಸೇವಾ ಸಂಸ್ಥೆಗಳಲ್ಲಿ ಧನದ ರೂಪದಲ್ಲಿ ಆಗಲೀ, ಪುಸ್ತಕ ರೂಪದಲ್ಲಿಯಾಗಲೀ ಉದಾರವಾದ ದೇಣಿಗೆಗಳನ್ನು ನೀಡಬೇಕೆಂದು ಮನವಿ ಮಾಡುತ್ತೇವೆ.

ವ್ಯಕ್ತಿಗಳು ಹಾಗೂ ಸಂಸ್ಥೆಗಳು ತಮ್ಮಲ್ಲಿನ ಅಪರೂಪದ ಪುಸ್ತಕಗಳನ್ನೂ ಗ್ರಂಥಾಲಯಕ್ಕೆ ನೀಡಬಹುದು.

ತಮ್ಮ ಎಲ್ಲ ದೇಣಿಗೆಗಳನ್ನು ಪುಸ್ತಕವಾಗಲೀ, ಹಣವಾಗಲೀ ಕಳುಹಿಸಬೇಕಾದ ವಿಳಾಸ -- ವಿಶೇಷಾಧಿಕಾರಿ, ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ ಹಾಗೂ ಸಂಶೋಧನ ಕೇಂದ್ರ -- ತಿರುಪತಿ -- 517 502.



ರ್ಣವಾದುದಾಗಿರುತ್ತದೆ. ವೇದಗಳ ಕಣ್ಣುಗಳ
ಜ್ಯೋತಿಷ, ವೇದಗಳ ಕಿವಿಗಳೇ, ೨. ನಿರುಕ್ತ -
ಗಳ ನಾಸಿಕವೇ, ೩. ಶಿಕ್ಷಾ - ವೇದಗಳ ಮು
೪. ವ್ಯಾಕರಣ - ವೇದಗಳ ಕೈಗಳು. ವೇದಗಳ
ಗಳು, ೬. ಛಂದಸ್ಸು ಆಗಿದೆ.

ಛಂದಃ ಪಾದೌ ತು ವೇದಸ್ಯ
ಹಸ್ತೌ ಕಲ್ಪೋಽಥ ಪಠ್ಯತೆ
ಜ್ಯೋತಿಷಾಮಯನಂ ಚಕ್ಷುಃ
ನಿರುಕ್ತಂ ಶ್ರೋತ್ರಮುಚ್ಯತೇ
ಶಿಕ್ಷಾ ಘ್ರಾಣಂ ತು ವೇದಸ್ಯ
ಮುಖಂ ವ್ಯಾಕರಣಂ ಸ್ಮೃತಮ್
ತಸ್ಮಾತ್ಸಾಂಗಮಧೀತ್ಯೈವ
ಬ್ರಹ್ಮಲೋಕೇ ಮಹೀಯತೆ

ಆದುದರಿಂದ ಈ ಆರೂ ವೇದಾಂಗಗ
ಅಧ್ಯಯನ ಮಾಡಿದಾಗಲೇ ವೇದಾಧ್ಯಯ
ಪೂರ್ಣವಾಗುವುದು.

### ೨. ಅ. ಜ್ಯೋತಿಷ

ಜ್ಯೋತಿಷವು ಜನರಲ್ಲಿ ಸಂಸ್ಕಾರವನ್ನು ಉ
ಮಾಡುತ್ತದೆ. ಅದು ಯಜ್ಞಗಳಿಗೆ ಮುಹ
ವನ್ನು ನಿರ್ಣಯಿಸಿ, ನಿಗದಿ ಮಾಡುತ್ತದೆ. ಯಜ್ಞ
ಮಂಟಪಗಳ ಅಳೆಯುವಿಕೆಯನ್ನೂ ಅದು ತಿ
ತ್ತದೆ. ವ್ಯಾಕರಣದಂತೆ ಜ್ಯೋತಿಷ್ಯವೂ ಕೂಡ ವ
ಕವಾದುದು ಲಗಧಾಚಾರ್ಯನ ಜ್ಯೋತಿಷವ
ಸಾಮಾನ್ಯ ಜ್ಯೋತಿಷವನ್ನು ತಿಳಿಸುವ ಅನೇಕ ಗ್ರ
ಗಳಿವೆ.

ವರಾಹ ಮಿಹಿರ, ಆರ್ಯಭಟ್ಟ, ಬ್ರಹ್ಮ
ಹಾಗೂ ಭಾಸ್ಕರಾಚಾರ್ಯರುಗಳ ಜ್ಯೋ
ಗ್ರಂಥಗಳೂ ಕೂಡ ತುಂಬಾ ಪ್ರಸಿದ್ಧಿ ಪಡೆದಿವೆ.

### ೨. ಆ. ಕಲ್ಪ

ಕಲ್ಪಸೂತ್ರಗಳಲ್ಲಿ ಯಜ್ಞಗಳ ವಿಧಿ ವಿಧಾನ
ವರ್ಣನೆ ಇದೆ. ನಾರದ, ಪರಾಶರ, ವಸಿಷ್ಠರು
ಕಲ್ಪಸೂತ್ರಗ್ರಂಥಗಳು ಹೆಚ್ಚು ಪ್ರಚಾರದಲ್ಲಿವೆ.

### ೨. ಇ. ನಿರುಕ್ತ

ಪಾಣಿನಿಯ ವ್ಯಾಕರಣದ ವ್ಯಾಪಕ ಪ್ರಚಾರದಿ
ಇತರೇ ಪ್ರಾಚೀನ ವ್ಯಾಕರಣಗಳು ಲುಪ್ತ
ಹೋದುವು. ಇದೇ ರೀತಿಯಲ್ಲಿ ನಿರುಕ್ತಗ್ರಂಥಗ
ಲುಪ್ತವಾದುವು. ವೇದಗಳ ವ್ಯಾಖ್ಯಾನವೇ ನಿ
ಗಳು. ಇವನ್ನು ವೇದಗಳ ವಿಶ್ವಕೋಶವೆಂದು
ಯಲಾಗುತ್ತದೆ. ಈಗ ಕೇವಲ ಯಾಸ್ಕಾಚಾ
ನಿರುಕ್ತವು ಮಾತ್ರ ಉಪಲಬ್ಧವಿದೆ. ಈ ನಿರು
ಮೇಲೆ ಅನೇಕ ಭಾಷ್ಯಗಳು, ಟೀಕೆಗಳ ಗ್ರಂಥಗ

ಇದೇ ರೀತಿಯಲ್ಲಿ ಕಶ್ಯಪ, ಶಾಕಪೂಣಿ ಇತ್ಯಾದಿಗಳ ನಿರುಕ್ತಗ್ರಂಥಗಳು ಕಂಡು ಬಂದಿವೆ.

### ೨. ಈ. ವ್ಯಾಕರಣ

ಭಾಷೆಯ ನಿಯಮವನ್ನು ಸ್ಥಿರಗೊಳಿಸುವುದು ವ್ಯಾಕರಣ ಕೆಲಸ. ಶಾಕಟಾಯನನ ವ್ಯಾಕರಣದ ಸೂತ್ರಗಳು ಹಾಗೂ ಇಂದು ಲಭ್ಯವಿರುವ ಪಾಣಿನೀಯ ವ್ಯಾಕರಣಗಳು ಯಜುರ್ವೇದದೊಂದಿಗೆ ಸಂಬದ್ಧವಾಗಿವೆ. ಇದಕ್ಕೆ ಮುಂಚೆಯೂ ಅನೇಕ ವ್ಯಾಕರಣ ಗ್ರಂಥಗಳು ಇದ್ದವು. ಇವುಗಳ ಸೂತ್ರಗಳು ಅಲ್ಲಲ್ಲಿ ಪಾಣಿನಿಯ ಗ್ರಂಥದಲ್ಲಿವೆ. ಪಾಣಿನಿಯ ವ್ಯಾಕರಣದ ಮೇಲೆ ಕಾತ್ಯಾಯನ ಋಷಿಯ ವಾರ್ತಿಕ ಹಾಗೂ ಮಹರ್ಷಿ ಪತಂಜಲಿಯ ಮಹಾಭಾಷ್ಯಗಳು ರಚಿತವಾಗಿವೆ.

ಆ ನಂತರದಲ್ಲಿ ಇದರ ಮೇಲೆ ಅನೇಕ ವ್ಯಾಖ್ಯೆಗಳು ಟೀಕೆಗಳು ಹಾಗೂ ವಿವೇಚನಾತ್ಮಕ ಗ್ರಂಥಗಳು - ಬಹಳಷ್ಟು ಸಂಖ್ಯೆಯಲ್ಲಿ ಸೃಷ್ಟಿಯಾಗಿವೆ.

ಇವೇ ಅಲ್ಲದೆ ಸಾರಸ್ವತ - ವ್ಯಾಕರಣ, ಕಾಮಧೇನು - ವ್ಯಾಕರಣ, ಹೇಮಚಂದ್ರ - ವ್ಯಾಕರಣ, ಪ್ರಾಕೃತ ಪ್ರಕಾಶ, ಪ್ರಾಕೃತ ವ್ಯಾಕರಣಗಳು, ಕಲಾಪ ವ್ಯಾಕರಣ, ಮುಗ್ಧಬೋಧ - ವ್ಯಾಕರಣ. ಇತ್ಯಾದಿ ಅನೇಕ ವ್ಯಾಕರಣ ಶಾಸ್ತ್ರಗ್ರಂಥಗಳು ಪ್ರಸಿದ್ಧಿಯನ್ನು ಪಡೆದಿವೆ. ಇವೆಲ್ಲವುಗಳ ಮೇಲೂ ಭಾಷ್ಯ ಟೀಕಾ ಹಾಗೂ ವಿವೇಚನೆಗಳು ಇವೆ.

### ೨. ಉ. ಶಿಕ್ಷಾ

ಶಿಕ್ಷಾದಲ್ಲಿ ಮಂತ್ರಗಳ ಸ್ವರ, ಅಕ್ಷರ, ಮಾತ್ರಾ ಹಾಗೂ ಉಚ್ಚಾರಣೆಗಳ ವಿವೇಚನೆ ಇರುತ್ತದೆ. ಪ್ರಸ್ತುತ ಈ ಕೆಳಗೆ ತಿಳಿಸಿರುವ ಶಿಕ್ಷಾಗ್ರಂಥಗಳು ಪ್ರಸಿದ್ಧಿ ಪಡೆದಿವೆ.

ಋಗ್ವೇದ : ಪಾಣಿನೀಯ ಶಿಕ್ಷಾ

ಕೃಷ್ಣಯಜುರ್ವೇದ : ವ್ಯಾಸ ಶಿಕ್ಷಾ

ಶುಕ್ಲಯಜುರ್ವೇದ : ಯಾಜ್ಞವಲ್ಕ್ಯ ಇತ್ಯಾದಿಯವರುಗಳ ೨೫ ಶಿಕ್ಷಾಗ್ರಂಥಗಳಿವೆ.

ಸಾಮವೇದ : ಗೌತಮಿ, ಲೋಮಶೀ ಹಾಗೂ ನಾರದೀಯ ಶಿಕ್ಷಾಗಳು.

ಅಥರ್ವವೇದ : ಮಾಂಡೂಕೀ ಶಿಕ್ಷಾ

### ೨. ಎ. ಛಂದಸ್ಸು

ಪ್ರಸ್ತುತ ವೈದಿಕ ಛಂದಸ್ಸಿನ ನಿರ್ದೇಶನವು ಮುಖ್ಯವಾಗಿ ಈ ಕೆಳಕಂಡ ಗ್ರಂಥಗಳಲ್ಲಿ ಕಂಡುಬರುತ್ತವೆ - ಗಾರ್ಗ್ಯಪ್ರೋಕ್ತ ಉಪನಿಧಾನ ಸೂತ್ರ (ಸಾಮವೇದೀಯ), ಪಿಂಗಳನಾಗ ಪ್ರೋಕ್ತ ಛಂದಃ ಸೂತ್ರ (ಛಂದೋವಿಚಿತಿ), ವೆಂಕಟ ಮಾಧವ ಕೃತ ಛಂದೋಽನುಕ್ರಮಣೀ ಹಾಗೂ ಜಯದೇವ ಛಂದಃಸೂತ್ರ. ಲೌಕಿಕ ಛಂದಗಳ ಬಗ್ಗೆಯೂ ಕೃತಿಗಳಿವೆ. ಮುಖ್ಯವಾದುವು - ಛಂದಃಶಾಸ್ತ್ರ (ಹಲಾಯುಧವೃತ್ತಿ), ಛಂದೋ ಮಂಜರೀ, ವೃತ್ತರತ್ನಾಕರ, ಶ್ರುತ ಬೋಧ, ಜಾನಾಶ್ರಯೀಯ ಛಂದೋವಿಚಿತಿ - ಇತ್ಯಾದಿ ಅನೇಕ ಗ್ರಂಥಗಳಿವೆ.

### ೩. ಉಪವೇದ

ಪ್ರತಿಯೊಂದು ವೇದಕ್ಕೂ ಒಂದೊಂದು ಉಪವೇದವಿದೆ. ಋಗ್ವೇದಕ್ಕೆ ಅರ್ಥವೇದ, ಯಜುರ್ವೇದಕ್ಕೆ ಧನುರ್ವೇದ, ಸಾಮವೇದಕ್ಕೆ ಗಾಂಧರ್ವವೇದ, ಅಥರ್ವವೇದಕ್ಕೆ ಆಯುರ್ವೇದ ಉಪವೇದಗಳಾಗಿವೆ.

### ೩. ಅ. ಅರ್ಥವೇದ

'ಬೃಹಸ್ಪತೇಃ ಅರ್ಥಾಧಿ ಕಾರಿಕಮ್' ಎಂಬುದರಿಂದ ಬಾರ್ಹಸ್ಪತ್ಯ ಅರ್ಥಶಾಸ್ತ್ರವಿರುವುದು ಗೊತ್ತಾಗುತ್ತದೆ. ಆದರೆ ಇಂದಿರುವ ಈ ಗ್ರಂಥವು ತುಂಬಾ ಕಿರುಪ್ರಮಾಣದ್ದು. ಕೌಟಿಲ್ಯನ ಅರ್ಥಶಾಸ್ತ್ರವು ಈ ನಿಟ್ಟಿನಲ್ಲಿನ ತುಂಬಾ ಮಹತ್ವಪೂರ್ಣವಾದ ಗ್ರಂಥವಾಗಿದೆ. ಇದೇ ಅಲ್ಲದೆ ಸೋಮದೇವ ಭಟ್ಟನ ನೀತಿ ವಾಕ್ಯಾಮೃತಸೂತ್ರ, ಚಾಣಕ್ಯಸೂತ್ರ, ಕಾಮಂದಕ, ಶುಕ್ರನೀತಿ - ಎಂಬ ಗ್ರಂಥಗಳೂ ಅರ್ಥಶಾಸ್ತ್ರವನ್ನು ಕುರಿತಾದ ಗ್ರಂಥಗಳಾಗಿವೆ.

### ೩. ಆ. ಧನುರ್ವೇದ

ಈ ವಿಷಯಕ್ಕೆ ಸಂಬಂಧಪಟ್ಟ ಹಾಗೆ ವೈಶಂಪಾಯನನ ಧನುರ್ವೇದ (ವೈಶಂಪಾಯನ ನೀತಿ - ಪ್ರಕಾಶಿಕಾ), ವೃದ್ಧ ಶಾರ್ಙ್ಗಧರ, ಯುಕ್ತಿ ಕಲ್ಪತರು, ಸಮರಾಂಗಣಸೂತ್ರಧಾರ ಎನ್ನುವ ಗ್ರಂಥಗಳು ದೊರೆಯುತ್ತವೆ.

ಧನುರ್ವೇದದಲ್ಲಿ ಅಸ್ತ್ರ ಶಸ್ತ್ರಗಳ ನಿರ್ಮಾಣ ಹಾಗೂ ಅವುಗಳ ಪ್ರಯೋಗದ ವರ್ಣನೆ ಇದೆ. ಈ ಶಾಸ್ತ್ರದಲ್ಲಿ ಪ್ರಯೋಗಮಾಡುತ್ತಾ - ಕಲಿಯುವುದನ್ನೂ ನಿರ್ಮಾಣ ಮಾಡುವುದನ್ನೂ ವಿವರಿಸಲಾಗಿದೆ. ಪ್ರಯೋಗ ಮಾಡುವ ಈ ಪರಂಪರೆಯು ಪೂರ್ತಿ ನಿಂತುಹೋಗಿರುವುದರಿಂದ ಇದು ಲುಪ್ತವಾಗಿದೆಯೆಂದೇ ಹೇಳಬಹುದು.

### ೩. ಇ. ಗಂಧರ್ವವೇದ

ಇದರಲ್ಲಿ ನೃತ್ಯ ಹಾಗೂ ಗಾಯನಕ್ಕೆ ಸಂಬಂಧಪಟ್ಟ ವಿಷಯಗಳಿವೆ. ರಾಗ - ರಾಗಿಣಿ, ತಾಳ - ಸ್ವರ, ವಾದ್ಯಗಳು ಹಾಗೂ ನೃತ್ಯಗಳ ಭೇದೋಪಭೇದ ವರ್ಣನೆಗಳು ಇವೆ. ಬಹಳ ಪ್ರಾಚೀನಕಾಲದಿಂದಲೂ ಗಾನವಿದ್ಯೆಯು ಪ್ರಚಾರದಲ್ಲಿದೆ. ಇದಕ್ಕೆ ಸಂಬಂಧಪಟ್ಟ 'ಘರಾನೆ'ಗಳೂ ಇವೆ. ಆದರೂ ಸಾಮಗಾನದ 'ಅರಣ್ಯಗಾನ' ಹಾಗೂ 'ಗೇಯಗಾನ' - ಇವೆರಡೂ ಪ್ರಾಕಾರಗಳು ಪೂರ್ತಿಯಾಗಿ ಲುಪ್ತವಾಗಿವೆ. ಪ್ರಾಚೀನ ಗಾಯನ ಶಾಸ್ತ್ರದ ಅನೇಕ ಗ್ರಂಥಗಳು ಇಂದಿಗೂ ದೊರೆಯುತ್ತವೆ. ಇವುಗಳಲ್ಲಿ ಮುಖ್ಯವಾದುವು - ಭರತಮುನಿಯ ಭರತ ನಾಟ್ಯಶಾಸ್ತ್ರ (ಇದರ ಬಗ್ಗೆ ಅಭಿನವಗುಪ್ತನ ಟೀಕೆ ಇದೆ), ದತ್ತಿಲಮುನಿಯ ದತ್ತಿಲಮ್, ಶಾರ್ಙ್ಗದೇವನ ಸಂಗೀತರತ್ನಾಕರ (ಇದರ ಬಗ್ಗೆ ಮಲ್ಲಿನಾಥ ಇತ್ಯಾದಿಯವರುಗಳ ಟೀಕೆಗಳು ಇವೆ) ಮತ್ತು ದಾಮೋದರ ಕೃತ 'ಸಂಗೀತ ದರ್ಪಣ' ಎಂಬವುಗಳು.

### ೩. ಈ. ಆಯುರ್ವೇದ

ಶರೀರದ ರಚನೆ, ರೋಗದ ಕಾರಣ, ಲಕ್ಷಣ, ಔಷಧಿ, ಗುಣ, ವಿಧಾನ ಹಾಗೂ ಚಿಕಿತ್ಸೆಯ ವರ್ಣನೆಗಳು ಈ ಶಾಸ್ತ್ರದಲ್ಲಿದೆ. ಆಯುರ್ವೇದ ಗ್ರಂಥಗಳಲ್ಲಿ ಅಶ್ವಿನೀ ಕುಮಾರ ಸಂಹಿತಾ, ಬ್ರಹ್ಮಸಂಹಿತಾ, ಭೇಲ ಸಂಹಿತಾ ಹಾಗೂ ಅಗ್ನಿಪುಸೂತ್ರರಾಜ - ಇವು ತುಂಬಾ ಪ್ರಾಚೀನವಾದ ಗ್ರಂಥಗಳು. ಇವಲ್ಲದೆ ಸುಶ್ರುತ ಸಂಹಿತಾ, ಧಾತುವಾದ, ಜಾಬಾಲಿಸೂತ್ರ, ಇಂದ್ರಸೂತ್ರ, ಶಬ್ದಕುತೂಹಲ ಹಾಗೂ ದೇವಲ ಸೂತ್ರಗಳೂ ಕೂಡ ಪ್ರಾಚೀನಗ್ರಂಥಗಳಾಗಿವೆ. ಇವುಗಳೊಂದಿಗೆ ಚರಕ ಸಂಹಿತಾ ಹಾಗೂ ಅಷ್ಟಾಂಗ ಹೃದಯಗಳೂ ಕೂಡ ಪ್ರಾಚೀನವಾದರೂ ಲಭ್ಯವಿದೆ.

ಆಯುರ್ವೇದದಲ್ಲಿ ಸಹಸ್ರಾರು ಗ್ರಂಥಗಳಿವೆ. ಇವುಗಳಲ್ಲಿ ಕೆಲವು ಮಾನವರಿಗೆ ಸಂಬಂಧಪಟ್ಟವುಗಳಾದರೆ, ಇನ್ನು ಕೆಲವು ಅಶ್ವ, ಗೋವು, ಗಜ ಹಾಗೂ ಇತರೇ ಪಶುಪಕ್ಷಿಗಳ ಚಿಕಿತ್ಸೆಗಳು ಹಾಗೂ ಅವುಗಳ ಉಪಾಯಗಳ ವರ್ಣನೆಗಳನ್ನು ಒಳಗೊಂಡಿವೆ.

ಹೀಗೆ ಈ ವೇದ, ವೇದಾಂಗ, ಉಪವೇದಗಳು ಹಿಂದೂ ಜನಜೀವನದ ಒಂದು ಭಾಗವಾಗಿ ಶತಶತಮಾನಗಳಿಂದಲೂ ಹಿಂದೂ ಧರ್ಮದ ಮೇಲೆ ಪ್ರಭಾವ ಬೀರುತ್ತಾ ಉಳಿದುಬಂದಿವೆ.

(ಸಂಗ್ರಹ)



## ತಿರುಮಲೆ ತಿರುಪತಿ ದೇವಸ್ಥಾನಗಳು -- ತಿರುಪತಿ.



# ಶ್ರೀ ವೆಂಕಟೇಶ್ವರ ವನಾಭಿವೃದ್ಧಿ ಯೋಜನೆ



ತರುವೊಂದ ಬೆಳೆವವನು ದೇವರಾ ಸೇವಕನು
ಹರಿಪನವ ತಲೆಮಾರುಗಳಿಗೆಲ್ಲ ಕರುಣೆಯನು
ಹರಸುವರು ಅವನ, ಜನ, ಅವನೆಂದು ನೋಡದವರು



ತಿರುಮಲೆಯ ಕಾಡುಗಳು ಶ್ರೀ ವೆಂಕಟೇಶ್ವರಸ್ವಾಮಿ ತನ್ನ ಭಕ್ತರಿಗೆಂದೇ ನೀಡಿದ ಪ್ರಶಸ್ತ ವರವಾಗಿದೆ. ದೇವರು ಸ್ವಯಂವ್ಯಕ್ತನಾದ ತಿರುಮಲೆಯ ಪವಿತ್ರ ಪರ್ವತದ ಅಮೂಲ್ಯವಾದ ಕಾಡುಗಳನ್ನು ಪರಿರಕ್ಷಿಸಿ ಕೊಳ್ಳುವ ತೀವ್ರ ಆಕಾಂಕ್ಷೆಯಿಂದ ತಿರುಮಲೆ ತಿರುಪತಿ ದೇವಸ್ಥಾನಗಳು 1981 ರಲ್ಲಿ ಜೀವ ಸೌಂದರ್ಯಯೋಜನೆಯಡಿಯಲ್ಲಿ ತಿರುಪತಿ, ತಿರುಮಲೆಗಳಲ್ಲಿ 29 ಲಕ್ಷ ಗಿಡಗಳನ್ನು ಬೆಳೆಸುವ ಮಹತ್ವಾಕಾಂಕ್ಷೆಯ ಅರಣ್ಯಾಭಿವೃದ್ಧಿ ಕ್ರಮವನ್ನು ಕೈಗೊಂಡು ಕ್ರಿಯಾಶೀಲವಾಯಿತು. ಈ ಯೋಜನೆಯ ಮೂಲ ಉದ್ದೇಶ -- ತಿರುಪತಿಯ ತಪ್ಪಲು ಪ್ರದೇಶದಲ್ಲೂ, ತಿರುಮಲೆಯ ಪರ್ವತಾವಳಿಯಲ್ಲೂ ಜೈವಿಕ ವಾತಾವರಣವನ್ನು ಪರಿರಕ್ಷಿಸಿ ಸಂವರ್ಧಿಸುವುದು.

ಈ ಯೋಜನೆಯ ಸಾಫಲ್ಯದಿಂದ ಉತ್ತೇಜಿತರಾಗಿ ಉತ್ಸಾಹಿತರಾಗಿ ತಿರುಮಲೆ ತಿರುಪತಿ ದೇವಸ್ಥಾನಗಳು ಮತ್ತೂ ಹಲವಾರು ಕಾರ್ಯಕ್ರಮಗಳನ್ನು ಅದೇ ದಿಕ್ಕಿನಲ್ಲಿ ಹಮ್ಮಿಕೊಂಡಿದೆ. ಇದರ ಹೆಸರು--

### ಶ್ರೀ ವೆಂಕಟೇಶ್ವರ ವನಾಭಿವೃದ್ಧಿಯೋಜನೆ

ತಿ. ತಿ. ದೇ. ಗಳ ಅರಣ್ಯ ವಿಭಾಗ ಹಮ್ಮಿಕೊಂಡಿರುವ ಈ ಅರಣ್ಯಾಭಿವೃದ್ಧಿ ಯೋಜನೆಯಲ್ಲಿ ಸಾರ್ವಜನಿಕರೂ ಭಾಗವಹಿಸಬಹುದಾದ ವಿಶೇಷ ಅವಕಾಶವನ್ನು ಕಲ್ಪಿಸಲಾಗಿದೆ. ಈ ಯೋಜನೆಯ ಹಲವಾರು ಪ್ರಮುಖ ವಿವರಗಳನ್ನು ಪಟ್ಟಿ ಮಾಡಲಾಗಿದೆ.

**ವೃಕ್ಷಸಂವರ್ಧನ ಯೋಜನೆ :** ರೂ.೨೫೦೦೦ - ದಾನವನ್ನು ನೀಡುವವರ ಹೆಸರಿನಲ್ಲಿ ಅಥವಾ ಅವರು ಅಪೇಕ್ಷಿಸುವ ಹೆಸರಿನಲ್ಲಿ ೫೦೦ ಸಸಿಗಳನ್ನು ತಿರುಪತಿ ತಿರುಮಲೆ ಗಳಲ್ಲಿ ನೆಟ್ಟು ಐದು ವರ್ಷ ಅವುಗಳನ್ನು ನೋಡಿಕೊಳ್ಳಲಾಗುವುದು.

**ವೃಕ್ಷಪ್ರಸಾದ :** ರೂ.೧೫೦೦೦ - ದಾನವನ್ನು ನೀಡುವವರ ಪರವಾಗಿ ತಿರುಪತಿ, ತಿರುಮಲೆಯಲ್ಲಿ ಪ್ರತಿವರ್ಷ ೧೦೦ ಫಲ, ಪುಷ್ಪ ತರುಗಳನ್ನು ಬೆಳೆಸಲಾಗುವುದು. ಹತ್ತುವರ್ಷಗಳ ಕಾಲ ದಾನಿಗಳ ಅಥವಾ ಅವರು ಅಪೇಕ್ಷಿಸುವ ಹೆಸರಿನಲ್ಲಿ ಪ್ರತಿವರ್ಷ ೧೦೦ ಹೂ ಹಣ್ಣುಗಳ ಸಸಿಗಳನ್ನು ವಿತರಿಸಲಾಗುವುದು

**ಸ್ಮಾರಕ ವನಗಳು:** ರೂ ೫೦೦೦ ದಾನ ನೀಡುವವರ ಹೆಸರಿನಲ್ಲಿ ತಿರುಪತಿ ತಿರುಮಲೆಗಳಲ್ಲಿ ಹತ್ತುಮರಗಳನ್ನು ಒಂದೆಡೆ ನೆಟ್ಟು ಐದುವರ್ಷ ನೋಡಿಕೊಳ್ಳಲಾಗುವುದು.

**ವನ ಸಂರಕ್ಷಣ ಭಾಗಸ್ವಾಮ್ಯ:** ರೂ ೨೦೦೦ ದಾನದಿಂದ ದಾನಿಗಳ ಹೆಸರನ್ನು ಹಿರಿದಾಗಿ ಪ್ರಕಟಿಸುವ ಫಲಕದೊಡನೆ ತಿರುಮಲೆಯ ವನಾಚ್ಛಾದನೆಯನ್ನು ಸಂರಕ್ಷಿಸುವ ಯೋಜನೆಯಿದು.

**ಮುಖ್ಯ ಸೂಚನೆ:-** ೧. ಈ ಎಲ್ಲ ದಾನಗಳೂ, ೩೫ ಸಿ.ಸಿ.ಬಿ ಕಲಮಿನಂತೆ ನೂರು ಶತಾಂಶ ಆದಾಯಕರ ವಿಮುಕ್ತ ವಾಗಿರುತ್ತದೆ.

೨. ಈ ಪರಿಷ್ಕರಣಗಳು ೧-೨-೯೬ ರಿಂದ ಜಾರಿಗೆ ಬಂದಿವೆ. ಅದಕ್ಕೂ ಹಿಂದೆ ಶ್ರೀ ವೆಂಕಟೇಶ್ವರ ವನಾಭಿವೃದ್ಧಿ ಯೋಜನೆಯಲ್ಲಿ ಸೇರಿದವರಿಗೆ ಹಳೆಯ ಸೌಲಭ್ಯಗಳು ಮುಂದುವರೆಯುತ್ತವೆ.

ತಿರುಮಲೆಯ ಅರಣ್ಯನಮ್ಮ ಪರಂಪರೆಯ ಅವಿಭಾಜ್ಯ ಅಂಗ. ಅದನ್ನು ಸಂರಕ್ಷಿಸಿ ಸಂವರ್ಧನಗೊಳಿಸುವ.

ದಶಕೂಪ ಸಮೋವಾಪಿ ದಶ ವಾಪಿ ಸಮೋ ಹ್ರದ
ದಶಹ್ರದ ಸಮಃ ಪುತ್ರ ದಶ ಪುತ್ರ ಸಮೋ ದ್ರುಮ

ಹತ್ತು ಬಾವಿಗಳು ಒಂದು ಕೆರೆಗೂ, ಹತ್ತು ಕೆರೆಗಳು ಒಂದು ಸರೋವರಕ್ಕೂ ಹತ್ತು ಸರೋವರಗಳು ಒಬ್ಬ ಮಗನಿಗೂ, ಹತ್ತು ಮಕ್ಕಳು ಒಂದು ತರುವಿಗೂ ಸಮ.

ಈ ಉದಾತ್ತ ಯೋಜನೆಯಲ್ಲಿ ಪಾಲುಗೊಂಡು ಉದಾರವಾಗಿ ದಾನನೀಡಿ ತಿರುಮಲೆಯನ್ನು -- ಶ್ರೀ ವೆಂಕಟೇಶ್ವರಸ್ವಾಮಿ ನಿವಾಸವನ್ನು -- ವನಸಿರಿಯಿಂದಲೂ ಸೌಂದರ್ಯಸಿರಿಯಿಂದಲೂ ಕೂಡಿರುವಂತೆ ಮಾಡುವಲ್ಲಿ ಸಹಕರಿಸಬೇಕೆಂದು ಕೋರಲಾಗಿದೆ.



**ದಾನಗಳ ಡಿ.ಡಿ. ಯನ್ನು ತಾವು ಕಳುಹಿಸ ಬೇಕಾದ ವಿಳಾಸ:**

**ಕಾರ್ಯನಿರ್ವಹಣಾಧಿಕಾರಿ, ತಿ.ತಿ.ದೇವಸ್ಥಾನಗಳು, ತಿರುಪತಿ.**



ಕಾರ್ಯನಿರ್ವಹಣಾಧಿಕಾರಿ

# ಜ್ಯೋತಿರ್ಭೀಮೇಶ್ವರ ವ್ರತ

---ಕೆ. ಕೇಶವಮೂರ್ತಿ.

ದೀಪಸ್ತಂಭಂ ಹೇಮಮಯಂ
ವಸ್ತ್ರಯುಗ್ಮೇನ ವೇಷ್ಟಿತಮ್
ದಾಸ್ಯಾಮಿ ತವ ದೇವ
ಸುಪ್ರೀತೋ ಭವ ಸರ್ವದಾ

ಈ ವರ್ಷ ಎರಡು ಆಷಾಢ ಮಾಸಗಳು. ಒಂದು ಅಧಿಕ ಮತ್ತೊಂದು ನಿಜ. ಹಬ್ಬಗಳು ಬರುವುದು ನಿಜಮಾಸದಲ್ಲೇ. ಆದರೆ ಕಾಲಶ್ರಾದ್ಧವನ್ನು ಮಾತ್ರ ಅಧಿಕ ಮತ್ತು ನಿಜಮಾಸಗಳೆರಡರಲ್ಲೂ ಮಾಡಬೇಕು. ವಿವಾಹವಾದ ಮೊದಲನೇ ವರ್ಷದ ಆಷಾಢಮಾಸದಲ್ಲಿ ಅತ್ತೆ - ಸೊಸೆಯರು ಒಂದೇ ಹೊಸಲನ್ನು ದಾಟಬಾರದು. ಅರ್ಥಾತ್ ಒಂದೇ ಮನೆಯಲ್ಲಿ ವಾಸಿಸಕೂಡದು - ಎಂಬುದು ಕೆಲವರ ಸಂಪ್ರದಾಯ. ಆಷಾಢಮಾಸದಲ್ಲಿ ಚಾಂದ್ರಮಾಸದ ಪ್ರಕಾರ ವಿವಾಹವನ್ನು ನಿಷೇಧಿಸಿದ್ದಾರೆ. ಇದಕ್ಕೆಲ್ಲಾ ಕಾರಣ ಈ ಲೇಖನ ವ್ಯಾಪ್ತಿಗೆ ಮೀರಿದ್ದರಿಂದ ಈ ತಿಂಗಳಿನಲ್ಲಿ ಬರುವ ಹಬ್ಬಗಳ ವಿಚಾರವನ್ನು ಮಾತ್ರ ಪ್ರಸ್ತಾಪಿಸೋಣ. ಅವುಗಳಲ್ಲಿ ಮುಖ್ಯವಾದುವು ಪ್ರಥಮೈಕಾದಶಿ, ವ್ಯಾಸಪೂರ್ಣಿಮೆ, ಆಡಿ ಶುಕ್ರವಾರ ಲಕ್ಷ್ಮೀಪೂಜೆ, ಮತ್ತು ಜ್ಯೋತಿರ್ಭೀಮೇಶ್ವರ ವ್ರತ. ಇವುಗಳಲ್ಲಿ ಆಷಾಢ ಬಹುಳ ಅಮಾವಸ್ಯೆಯ ದಿನ ಬರುವ ಜ್ಯೋತಿರ್ಭೀಮೇಶ್ವರ ವ್ರತವು ಅತಿ ಪ್ರಸಿದ್ಧವಾದುದು.

ದಿನಾಂಕ ೧೪-೮-೧೯೯೬ ರಂದು ಜ್ಯೋತಿರ್ಭೀಮೇಶ್ವರ ವ್ರತ. ಗಂಡನ ಸರ್ವಾಂಗೀಣ ಶ್ರೇಯೋಭಿವೃದ್ಧಿಗಾಗಿ ಹೆಂಡತಿಯು ಆದರಿಸುವ ವ್ರತದ ಇಣುಕು ನೋಟ ಇಲ್ಲಿದೆ. ಈ ಒಂದು ದಿನ ಗಂಡನಿಗೆ ಹೆಂಡತಿಯಿಂದ ಸುಯೋಗ ಲಭ್ಯ.

ಈ ವ್ರತದ ಮಹಿಮೆಯಿಂದ ಸತ್ತ ಪತಿಯು ಬದುಕಿದ್ದರಿಂದ 'ಇದಕ್ಕೆ ಪತಿ ಸಂಜೀವಿನೀ ವ್ರತ'ವೆಂದೂ, ಬದುಕಿರುವ ಪತಿಯು ಭೀಮಸೇನನಂತೆ ಧೃಢಕಾಯನೂ, ಬಲಶಾಲಿಯೂ, ಆರೋಗ್ಯವಂತನೂ ಆಗಿರಬೇಕೆಂಬ ಅಭೀಪ್ಸೆಯಿಂದ ಮಾಡುವ ವ್ರತವಾದ್ದರಿಂದ ಇದಕ್ಕೆ 'ಭೀಮನ ಅಮಾವಾಸ್ಯೆ ವ್ರತ'ವೆಂದೂ, ಗಂಡನಿಗೆ ಹೆಂಡತಿಯು ಸಲ್ಲಿಸುವ ಪೂಜೆಯಿದಾದ್ದರಿಂದ 'ಗಂಡನಪೂಜೆ' ಎಂದೂ, ಪ್ರಜ್ವಲಿಸುತ್ತಿರುವ ದೀಪದ ಕಂಬಗಳಿಗೆ ಪೂಜೆ ಮಾಡುವುದರಿಂದ ಇದಕ್ಕೆ 'ಜ್ಯೋತಿಸ್ತಂಭ ವ್ರತ'ವೆಂದೂ ಕರೆಯುವರು. ಸತಿಯು ತನ್ನ ಪತಿಯ ಹಿತಕ್ಕಾಗಿ ಅಂದರೆ ಪರೋಕ್ಷವಾಗಿ ತನ್ನ ಹಿತಕ್ಕಾಗಿ ಆಚರಿಸುವ ವ್ರತವಿದಾದ್ದರಿಂದ ಇದು ಸ್ತ್ರೀಯರಿಗೆ ಹೇಳಿರುವ ವ್ರತಗಳಲ್ಲಿ ಒಂದು.

ವಿವಾಹಿತ ವಧುಗಳು ಐದು ವರ್ಷ, ಒಂಬತ್ತು ವರ್ಷ ಅಥವಾ ೧೬ ವರ್ಷಗಳ ಕಾಲ ಈ ವ್ರತವನ್ನಾಚರಿಸಿ ಕಡೆಯಲ್ಲಿ ಉದ್ಯಾಪನೆ ಮಾಡುತ್ತಾರೆ. ಇದು ಶಿವನ ಪ್ರೀತ್ಯರ್ಥವಾಗಿ ಮಾಡುವ ವ್ರತವಾದ್ದರಿಂದ ಪೂಜೆಯ ಮಧ್ಯೆ ಶಿವಾಷ್ಟೋತ್ತರ ಅಥವಾ ಶಿವ ಸಹಸ್ರನಾಮಾರ್ಚನೆ ಮಾಡಬಹುದು. ಕೆಲವು ವ್ರತಗಳಲ್ಲಿ ಹೇಳಿರುವಂತೆ ಇಲ್ಲಿಯೂ ದೋರಗ್ರಂಥಿಪೂಜೆಯುಂಟು. ಹತ್ತು ಗಂಟುಗಳನ್ನು ಹಾಕಿದ ದಾರವನ್ನು ಪೂಜಿಸಿ ಪೂಜಾನಂತರ ಕೈಗೆ ಧಾರಣ ಮಾಡಬೇಕು.

ಈ ವ್ರತದ ವಿಧಿವಿಧಾನ ಹಾಗೂ ಕಥಾರ್ಥವು ಭವಿಷ್ಯೋತ್ತರ ಪುರಾಣದಲ್ಲಿದೆ. ಸೌರಾಷ್ಟ್ರ ದೇಶದ ವಜ್ರಬಾಹುವೆಂಬ ರಾಜನಿಗೆ ವೈಜಯಶೇಖರನೆಂಬ ಮಗನಿದ್ದನು. ಮಗನು ವಿವಾಹಕ್ಕೆ ಮೊದಲೇ ಮೃತನಾಗಲು ಆ ಕಳೇಬರಕ್ಕಾದರೂ ವಿವಾಹಮಾಡಿ ಸಂತೋಷ ಪಡಬೇಕೆಂದು ಯೋಚಿಸಿದ ರಾಜನು, ತನ್ನ ಮಗನ ಮೃತದೇಹದೊಡನೆ ವಿವಾಹವಾಗುವ ಕನ್ಯೆಗೆ ಲಕ್ಷರೂಪಾಯಿಗಳನ್ನು ಕೊಡುತ್ತೇನೆಂದು ದೇಶದೇಶಗಳಲ್ಲೆಲ್ಲಾ ಡಂಗೂರ ಸಾರಿಸಿದ. ಶವಕ್ಕೆ ಹೆಣ್ಣುಕೊಡಲು ಯಾರು ತಾನೇ ಮುಂದಾದಾರು?

ಆತನ ಪಟ್ಟಣದಲ್ಲೇ ಸದಾಚಾರಸಂಪನ್ನನೂ, ಸತ್ಪುರುಷನೂ, ಭಗವದ್ಭಕ್ತನೂ, ದರಿದ್ರನೂ ಆದ ಮಾಧವಶರ್ಮನೆಂಬ ಬ್ರಾಹ್ಮಣನೊಬ್ಬನಿದ್ದನು. ಅವನಿಗೆ ಐವರು ಹೆಣ್ಣುಮಕ್ಕಳು ಮತ್ತು ಒಂಬತ್ತು ಗಂಡು ಮಕ್ಕಳು. ತನ್ನ ದಾರಿದ್ರ್ಯವನ್ನು ನೀಗಿಕೊಳ್ಳಲು ಪರಮೇಶ್ವರನು ತನಗೆ ಒದಗಿಸಿರುವ ಸದವಕಾಶವಿದೆಂದು ಬಗೆದು ಆ ಬ್ರಾಹ್ಮಣನು ತಮ್ಮ ಹೆಣ್ಣುಮಕ್ಕಳಲ್ಲಿ ಒಬ್ಬಳನ್ನು ಕೊಡುವುದಾಗಿ ನಿರ್ಧರಿಸಿದ. ವಿವಾಹ ಮೃತದೇಹದೊಡನೆ ಜರುಗಿತು. ಇಬ್ಬರಿಗೂ ಸ್ಮಶಾನಯಾತ್ರೆಯಾಯಿತು. ಮಗನನ್ನು ಚಿತೆಯ ಮೇಲಕ್ಕೆ ಏರಿಸಿ ಎಲ್ಲರೂ ಊರ ಕಡೆಗೆ ಬಂದರು.

ಅನಾಥೆಯಾದ ಆ ಬಾಲಕಿಯು ಅನ್ಯಮಾರ್ಗವಿಲ್ಲದೆ ಅನನ್ಯಭಕ್ತಿಯಿಂದ ಜ್ಯೋತಿರ್ಮಹೇಶ್ವರನನ್ನು ಭಜಿಸಿದಳು. ಆಕೆಯ ಭಕ್ತಿಗೆ ಮೆಚ್ಚಿದ ಮಹೇಶ್ವರ ಪಾರ್ವತೀಸಮೇತನಾಗಿ ಪ್ರತ್ಯಕ್ಷನಾದನು. ಪ್ರತ್ಯಕ್ಷರಾದ ಉಮಾಮಹೇಶ್ವರರಿಗೆ ಬಾಲಕಿಯು ಶ್ರದ್ಧಾಭಕ್ತಿಗಳಿಂದ ನಮಸ್ಕರಿಸಿ, ತನ್ನ ಪತಿಯನ್ನು ಬದುಕಿಸಿಕೊಡುವಂತೆ ಮೊರೆಯಿಟ್ಟಳು. ಆಗ ಜಗದ್ರಕ್ಷಕನೂ ಆರ್ತಜನಪರಿಪಾಲಕನೂ ಆದ ಈಶ್ವರನು, ಸ್ತ್ರೀಯರ ಸಕಲ ಪಾಪಗಳನ್ನೂ ಹೋಗಲಾಡಿಸಿ ಸೌಮಂಗಲ್ಯಾಭಿವೃದ್ಧಿಮಾಡಿ, ಪುತ್ರ ಪೌತ್ರರೊಡನೆ ಸುಖವಾಗಿರುವ ಅತ್ಯಂತ ಶ್ರೇಷ್ಠವಾದ ವ್ರತವೊಂದರ ವಿಧಿವಿಧಾನಗಳನ್ನು ಬಾಲಕಿಗೆ ಪರಮ ಪ್ರೀತಿಯಿಂದ ಉಪದೇಶಿಸಿದನು.



ತಿರುಮಲೆ ತಿರುಪತಿ ದೇವಸ್ಥಾನಗಳು ತಿರುಪತಿ

# ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನ ಯೋಜನೆ

**ಎನ್. ರಮೇಶ್‌ಕುಮಾರ್**, ಐ.ಎ.ಎಸ್.,

ಕಾರ್ಯನಿರ್ವಹಣಾಧಿಕಾರಿ.

ಪ್ರಿಯ ಭಕ್ತ ಬಂಧುಗಳೆ;

ಅನ್ನದಾನಕ್ಕಿಂತ ಇನ್ನು ಚೆನ್ನಾದ ಉನ್ನತವಾದ ದಾನ ಮತ್ತೊಂದಿಲ್ಲ. ಹಸಿದು ಬಂದವರಿಗಶನವೀಯುವುದು ನಮ್ಮ ದೇಶದಲ್ಲಿ ಒಂದು ಸೇವೆ ಮಾತ್ರವೇ ಅಲ್ಲ; ವೇದ ಕಾಲದಿಂದ ಆಚರಣೆಯಲ್ಲಿರುವ ಪರಂಪರಾಗತ ಧರ್ಮವೂ ಆಗಿದೆ. ಆಹಾರವನ್ನು ನೀಡುವವರು ದೇವತೆಗಳೊಡನೆ ಸ್ಥಾನ ಪಡೆಯುವರೆಂದು ಹೇಳಲಾಗಿದೆ.

ತಿರುಮಲೆ ಯಾತ್ರಿಕಗರಿಗೆ ಉಚಿತವಾಗಿ ಹಾಗೂ ಪೂರ್ಣವಾಗಿ ಭೋಜನ ನೀಡುವ ಉದ್ದೇಶದಿಂದ 1985 ರಲ್ಲಿ ತಿರುಮಲೆ ತಿರುಪತಿ ದೇವಸ್ಥಾನಗಳಿಂದ ಆರಂಭಿಸಲ್ಪಟ್ಟ ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನಯೋಜನೆಯು ಶೋಭಾಕರವಾದ ಯಶಸ್ಸು ಪಡೆದಿದೆ. ಭಾರತಾದ್ಯಂತದ ದಾನಿಗಳಿಂದ ಈ ಯೋಜನೆಯ ಬಗ್ಗೆ ಅತ್ಯುತ್ಸಾಹ ಕಂಡು ಬರುತ್ತಿದೆ.

ಭೋಜನದ ಗುಣಮಟ್ಟವೂ, ಉತ್ಕೃಷ್ಟತೆಯೂ, ಸಾರ್ವಜನಿಕರ ಶ್ಲಾಘನೆಗೆ ಪಾತ್ರವಾಗಿದೆ. ಈ ವಿಶಿಷ್ಟವಾದ ಅನ್ನದಾನಯೋಜನೆಯ ಸಂತಸಕರ ಫಲವನ್ನು ತಿರುಮಲೆಯ ಬಹುತೇಕ ಯಾತ್ರಿಕರು ಹೊಂದುತ್ತಿದ್ದಾರೆ.

ನಿತ್ಯ ಅನ್ನದಾನಯೋಜನೆಯಲ್ಲಿ, ಶ್ರೀ ಸಾಮಾನ್ಯ ಭಕ್ತರೂ ತಮ್ಮ ಯಥಾಶಕ್ತಿ ವಂತಿಗೆಯನ್ನು ಸಲ್ಲಿಸುವುದರ ಮೂಲಕ, ಪಾಲುಗೊಳ್ಳುವಂತೆ ಮಾಡಬೇಕೆಂದು ಯೋಚಿಸಿ, ಈ ವಂತಿಗೆಯ ಮೊತ್ತವನ್ನು ಸಾಕಷ್ಟು ಕಡಿಮೆ ಮಾಡಲು ತಿ. ತಿ. ದೇವಸ್ಥಾನಗಳು ಈಚೆಗೆ ನಿರ್ಧರಿಸಿದೆ. ತಾವು ರೂ. 1000/- ಅಥವಾ ಗುಣಕಗಳಲ್ಲಿ ದಾನ ಮಾಡಿದರೂ ಸಾಕು; ಉನ್ನತ ಹಾಗೂ ಅರ್ಹವಾದ ಕಾರ್ಯದಲ್ಲಿ ನೆರವು ನೀಡಿದಂತಾಗಿ ಆ ಮೂಲಕ ಕಾಲಾತೀತ ಪರಂಪರೆಯಾದ ಅನ್ನದಾನಯೋಜನೆಯನ್ನು ತಿ.ತಿ.ದೇ. ಉಳಿಸಿಕೊಂಡು ಮುಂದುವರೆಯುವಂತೆ ಮಾಡಿದವರಾಗುತ್ತೀರಿ.

ದೂರದೂರುಗಳಿಂದ ತಿರುಮಲೆಗೆ ಆಗಮಿಸುವ ಯಾತ್ರಿಕರ ಬಗ್ಗೆ ತಮ್ಮ ಹೃದಯ ಸಹಾನುಭೂತಿಯಿಂದ ಆರ್ದ್ರವಾಗುವಲ್ಲಿ, ಪರಿಷ್ಕೃತವಾದ ನಿತ್ಯ ಅನ್ನದಾನಯೋಜನೆಯಲ್ಲಿ ಸೇರಿ, ಈ ಪವಿತ್ರ ಸೇವೆಯಲ್ಲಿ ಭಾಗಿಗಳಾಗಿರಿ.

ಅನ್ನೇಶ್ರಿತಾನಿ ಬೂತಾನಿ ಅನ್ನಂ ಪ್ರಾಣಮಿತಿ ಶ್ರುತಿ:
ತಸ್ಮಾದನ್ನಂ ಪ್ರದಾತವ್ಯಂ ಅನ್ನಂ ಹಿ ಪರಮಂ ಹವಿ:
--ಬೋಧಾಯನ ಧರ್ಮಸೂತ್ರ.

ಒಳಶಕ್ತಿಯ ಜೀವಸತ್ವ ಆಹಾರ ಎಂದು ವೇದಗಳು ಘೋಷಿಸುತ್ತಿವೆ. ಅನ್ನದಾನ, ಭೌತಿಕ ಗುಣಗಳನ್ನು ಮೀರಿ ನಿಲ್ಲುವ ಅಮೂಲ್ಯ ಕ್ರಮವಾಗಿದೆ. ಹಾಗಾಗಿ ಅನ್ನದಾನ ಮಾಡಬೇಕು.

ವಂದನೆಗಳೊಡನೆ ತಮ್ಮ ವಿಶ್ವಾಸಿ,
**ಎನ್. ರಮೇಶ್‌ಕುಮಾರ್**

"ಜ್ಯೋತಿರ್ಮಹೇಶ್ವರನಾದ ನನ್ನನ್ನು ಜ್ಯೋ ಸ್ತಂಭಗಳ ಪೂಜೆಯಿಂದ ಆರಾಧಿಸಿ, ಆದಿಯ ಗಲೀ, ಮಧ್ಯದಲ್ಲಾಗಲೀ ಅಥವಾ ಅಂತ್ಯದ ಗಲೀ ಉದ್ಯಾಪನೆ ಮಾಡಿದರೆ ಅಂತಹ ಸ್ತ್ರೀ ರಿಗೆ ದೀರ್ಘಸೌಮಂಗಲ್ಯವನ್ನು ಅನುಗ್ರಹಿಸುತ್ತೇ ಆದಕಾರಣ ಪತಿಯ ಸಂಜೀವನಕ್ಕಾಗಿ ನೀನೂ ಸ ಈ ವ್ರತವನ್ನು ಮಾಡು" ಎಂದು ಹೇಳಿ ಪರಶಿವ ಅಂತರ್ಧಾನನಾದನು.

ಆಗ ಬಾಲಕಿಯು ಪರಮಸಂತೋಷದಿಂ ಮಣ್ಣಿನಿಂದಲೇ ಜ್ಯೋತಿಸ್ತಂಭಗಳನ್ನು ಮಾ ವಿಧ್ಯುಕ್ತವಾಗಿ ಪರಮಭಕ್ತಿಯಿಂದ ಜ್ಯೋತಿರ್ಮ ಮೇಶ್ವರನನ್ನು ಅರ್ಚಿಸಿದಳು. ಈ ವ್ರತದ ಪ್ರಭಾವದಿಂದ ಮರಣಹೊಂದಿದ್ದ ಆಕೆಯ ಪತಿಯು ಜೀವಂತನಾಗಿ ಚಿತೆಯ ಮೇಲಿಂದೆದ್ದು ಬಂದನು ಅಲ್ಲದೆ ಅವರಿಗೆ ಅಲ್ಲಿಯೇ ಸರ್ವಾಲಂಕಾರಯುಕ್ತವಾದ ಪಟ್ಟಣವೊಂದು ಆ ತ್ರಿಪುರಾಂತಕನ ದಯೆಯಿಂದ ಉಂಟಾಯಿತು. ಅಲ್ಲಿ ಸತಿಪತಿಗ ಬ್ಬರೂ ಸಂತೋಷದಿಂದಿರುತ್ತಿದ್ದರೆಂದು ಸೂತಪ ರಾಣಿಕರು ಶೌನಕಾದಿ ಮುನಿಗಳಿಗೆ ಈ ಕಥೆಯನ್ನು ನಿರೂಪಿಸಿದರು.

ಆ ವಧುವು ಈ ವ್ರತವನ್ನು ಮಾಡಿದ್ದು ಆಷಾ ಬಹುಳ ಅಮಾವಾಸ್ಯೆಯಾದ್ದರಿಂದ ಇಂದಿಗೂ ಅದನ್ನು ಅಮಾವಾಸ್ಯೆಯ ದಿನವೇ ಮಾಡುವ ಸಂಪ್ರದಾಯರೂಢಿಗೆ ಬಂದಿತು. ವ್ರತೋದ್ಯಾಪನ ಮಾಡಿದ ನಂತರ ಪೂಜಿಸಿದ ಜ್ಯೋತಿಸ್ಥಂಭಗಳನ್ನು ಸ್ತ್ರೀಯರು ತಮ್ಮ ಅಣ್ಣ ಅಥವಾ ಅಣ್ಣನಿಲ್ಲದಿದ್ದ ತಮ್ಮನಿಗೆ ದಾನ ಮಾಡಬೇಕು. ಅಣ್ಣತಮ್ಮಂದಿರಿ ದಿದ್ದರೆ ಸತ್ಪಾತ್ರರಿಗೆ ಯಾರಿಗೆ ಬೇಕಾದರೂ ದಾ ಮಾಡಬಹುದು. ಶೋಡಷ ದಾನಗಳಲ್ಲಿ ದೀಪದ ನವೂ ಒಂದು. ಈ ಜ್ಯೋತಿಸ್ಥಂಭಗಳನ್ನು ಚಿನ್ನದ ಮಾಡಿಸಬೇಕೆಂದಿದೆ. ಶಕ್ತಿಯಿಲ್ಲದವರು ಬೆಳ್ಳಿಯ ಲ್ಲಿಯೂ ಅದೂ ಸಾಧ್ಯವಿಲ್ಲದವರು ಹಿತ್ತಾಳೆ ಸ್ತಂಭ ಳನ್ನು ಪೂಜಿಸಬಹುದು. ದೀಪವು ಯಾವ ಲೋಹ ಎನ್ನುವುದಕ್ಕಿಂತ ಭಕ್ತಿಯೇ ಹೆಚ್ಚಿನದು. ಈ ವ್ರತವನ್ನು ಮಾಡಿದ ಸ್ತ್ರೀಯರು ತಮ್ಮ ಗಂಡಂದಿರೊಡನೆ ಇ ಸುಖವಾಗಿದ್ದು ಕಡೆಯಲ್ಲಿ ಶಿವನ ಸಾಯುಜ್ಯವನ್ನು ಸೇರುತ್ತಾರೆ.

ಉದ್ಯಾಪನೆಯಾದ ಮೇಲೂ ಪ್ರತಿವರ್ಷ ಈ ವ್ರತವನ್ನು ಮಾಡುತ್ತಿರಬೇಕು. ಇದರಿಂದ ಸ್ತ್ರೀಯ ಸಮಸ್ತ ಕಾಮನೆಗಳೂ ನೆರವೇರುವುದರಲ್ಲಿ ಸಂ ಯವಿಲ್ಲ.

ರಾಜಿತಂ ದೀಪಪಾತ್ರಂ ಚ
ಸ್ವರ್ಣವರ್ತಿ ಸಮನ್ವಿತಮ್
ದಾಸ್ಯಾಮಿ ಗಿರಿಜಾಕಾಂತ
ಮಮಾಭೀಷ್ಟ ಪ್ರದೋಭವ

ಓಂ ಶ್ರೀ ಜ್ಯೋತಿರ್ಭೀಮೇಶ್ವರಾಯ ನಮಃ

# ವೈದಿಕ ಉಪನಯನ

---ಕೆ. ಸಿ. ರಾಮಚಂದ್ರಶರ್ಮಾ.

ಉಪ ಎಂದರೆ ಸಮೀಪ ಎಂದರ್ಥ. ನಯನ ಅಂದರೆ ಒಯ್ಯುವುದು ಅಂದರೆ "ಸಮೀಪಕ್ಕೆಒಯ್ಯುವುದು" ಎಂದರ್ಥವಾಗುತ್ತದೆ. ವೇದದ ಸಮೀಪಕ್ಕೆ ಗಾಯತ್ರೀಮಾತೆಯ ಸಮೀಪಕ್ಕೆ ಒಯ್ಯುವುದೇ "ಉಪನಯನ". ಯೌಗಿಕಾರ್ಥದಲ್ಲಿ ವಿದ್ಯಾರ್ಜನೆಗೆ ಗುರುವಿನ ಸಮೀಪಕ್ಕೆ ವಟುವನ್ನು ಬಿಡುವುದೆಂದಾಗುತ್ತದೆ. ಶ್ರೌತ ಮತ್ತು ಶಾಸ್ತ್ರಾದಿ ಅನೇಕ ವಿಷಯಗಳನ್ನು ಸಹ ಅಧ್ಯಯನ ಮಾಡಲು ಅಧಿಕಾರಿಯೆಂದು ಭಾರದ್ವಾಜರು ಹೇಳುತ್ತಾರೆ. ಉಪನಯನವೆಂದರೆ ಆಚಾರ್ಯನು ವಟುವನ್ನು ಗಾಯತ್ರೀಯಿಂದ ಸಂಸ್ಕರಿಸುವುದು ಎಂದು ಕಾತ್ಯಾಯನರು, ವೇದೋಕ್ತ ಸಂಸ್ಕಾರವೆಂದು ಆಪಸ್ತಂಬರು ಸಹ ಹೇಳಿದ್ದಾರೆ. ಮನುವು ಸಹ ವಟುವು ಎರಡನೆಯ ಜನ್ಮವನ್ನು ಹೊಂದುತ್ತಾನೆ. ತಾಯಿ ಸಾವಿತ್ರೀ, ಆಚಾರ್ಯನೇ ತಂದೆ. ವೇದರೂಪವಾದ ಗಾಯತ್ರೀ ಸಂಸ್ಕಾರದಿಂದ ಉಂಟಾಗುವ ನವೀಕರಣವೇ ಪುನರ್‌ಜನ್ಮ ಎಂದು ಹೇಳಿದ್ದಾರೆ. ಶ್ರುತಿಯು ಸಹ "ಗಾಯತ್ರ್ಯಾ ಬ್ರಾಹ್ಮಣ ಮಸೃಜತ್" ಎಂದು ಹೇಳಿದೆ. ಮೇಲೆ ಹೇಳಿದ ಅಭಿಪ್ರಾಯಗಳಿಂದ ಬ್ರಹ್ಮಜನ್ಮ ಎಂದು ಸ್ಪಷ್ಟವಾಗುತ್ತದೆ. ಆದ್ದರಿಂದಲೇ ನಮ್ಮ ಹಿರಿಯರು ಇದನ್ನು "ಬ್ರಹ್ಮೋಪದೇಶ" ವೆಂದು ಹೇಳುವುದು ರೂಢಿಯಲ್ಲಿ ಇದೆ. ನಲವತ್ತೆಂಟು ಸಂಸ್ಕಾರಗಳಿಂದ ಸಂಸ್ಕರಿಸಲ್ಪಟ್ಟವನು "ಬ್ರಹ್ಮಸಾಯುಜ್ಯ" ಪಡೆಯುತ್ತಾನೆಂದು ಸ್ಮೃತಿಕಾರರು ತಿಳಿಸಿರುತ್ತಾರೆ. ಗರ್ಭಾದಾನಾದಿ ಸಂಸ್ಕಾರಗಳಿಂದ ಶರೀರಕ್ಕೆ ಸಂಬಂಧಪಟ್ಟ ಸಂಸ್ಕಾರಗಳನ್ನು ಮಾಡಿದರೆ, ಚಿತ್ರಗಳನ್ನು ನಿರ್ಮಿಸುವವನು ಒಂದೊಂದೇ ಅಂಗವನ್ನು ನಿಧಾನವಾಗಿ ಚಿತ್ರಿಸಿದ ನಂತರ ಆ ಚಿತ್ರವು ಯಾವರೀತಿ ಪೂರ್ಣತ್ವವನ್ನು ಪಡೆಯುತ್ತದೆಯೋ, ಅದರಂತೆ ಮೇಲಿನ ಸಂಸ್ಕಾರಗಳನ್ನು ಉಕ್ತಕಾಲದಲ್ಲಿ ಮಾಡಿದರೆ ಶರೀರದಲ್ಲಿರುವ ಎಲ್ಲಾ ದೋಷಗಳನ್ನು ಅವು ಹೋಗಲಾಡಿಸಿ ಉತ್ತಮವಾದ ಬ್ರಾಹ್ಮಣ್ಯವು ಉಂಟಾಗುತ್ತದೆ.

ವಿಶಿಷ್ಟ ಬ್ರಾಹ್ಮಣ ದಂಪತಿಗಳಿಂದ ಜನಿಸಿದ ಶಿಶುವು ಜಾತ್ಯಾ ಬ್ರಾಹ್ಮಣ ಶಿಶುವೆನಿಸಿದರೂ ಶಾಸ್ತ್ರವು-

"ಜನ್ಮನಾ ಜಾಯತೇ ಶೂದ್ರಃ
ಕರ್ಮಣಾ ಜಾಯತೇ ದ್ವಿಜಃ"

ಎಂದು ಸಾರುತ್ತದೆ. ಹುಟ್ಟು ಮಾತ್ರದಿಂದ ಬಾಲಕನು ಬ್ರಾಹ್ಮಣನಾಗುವುದಿಲ್ಲ ಆಯಾ ಶಾಖೆಯ ಸೂತ್ರಕಾರರು ವಿಧಿಸಿದಂತೆ ಉಪನಯನ ಎಂಬ ಸಂಸ್ಕಾರ ಮಾಡುವುದರಿಂದ ಸಂಸ್ಕೃತವಾದ ಮೇಲೆಯೇ ಬ್ರಹ್ಮಚಾರಿ, ವಟು ಎನ್ನಿಸಿಕೊಳ್ಳುತ್ತಾನೆ. "ವಸಂತೇ ಬ್ರಾಹ್ಮಣ ಮುಪನಯೀತ" ಗ್ರೀಷ್ಮೇ ರಾಜನ್ಯಂ ಶರದಿ ವೈಶ್ಯಂ" - ಬ್ರಾಹ್ಮಣನಿಗೆ ಉಪನಯ ವಸಂತ ಋತುವು, ಕ್ಷತ್ರಿಯನಿಗೆ ಗ್ರೀಷ್ಮ ಋತುವು, ವೈಶ್ಯನಿಗೆ ಶರದೃತುವು ಪ್ರಶಸ್ತವಾದುದು.

"ಕಾಲೇ ಕರ್ಮವಿಧೀಯತೇ" ಲೋಕದಲ್ಲಿ ಯೋಗ್ಯವಾದಸ್ಥಳದಲ್ಲಿ ಮತ್ತು ಸಕಾಲದಲ್ಲಿ ಉಕ್ತ ರೀತಿಯಲ್ಲಿ ಮಾಡುವ ಕೆಲಸವು ಸಫಲವಾಗುವೆಂಬುದು ಎಲ್ಲರಿಗೂ ತಿಳಿದ ವಿಷಯ. ಇದೇ ನ್ಯಾಯವು ಶಾಸ್ತ್ರೀಯ ವಿಷಯಗಳಿಗೂ ಇರುತ್ತದೆ. ಎಲ್ಲ ಧರ್ಮಾಚರಣೆಗೂ ಮೊದಲೇ ಉಪನಯನ ಮುಗಿಸಿಬಿಡಬೇಕು. ಮೋಕ್ಷಫಲವನ್ನು ಕೊಡುವ ಧರ್ಮ ವೃಕ್ಷಕ್ಕೆ ಹಾಕುವ ಕಾಲ ತಪ್ಪಿ ಬೀಜಹಾಕಿದರೆ ಅದು ವ್ಯರ್ಥವಾಗುತ್ತದಷ್ಟೆ? ಹಾಗೆಯೇ ಉಪನಯನವನ್ನು ಬೇಗನೇ ಎಂಟು ವರ್ಷದಲ್ಲೇ ಮಾಡಿಬಿಡಬೇಕು. ಯೋಗ್ಯ ಮುಹೂರ್ತದಲ್ಲಿ ಮಾಡಿ ಮುಗಿಸಬೇಕು.



ಓದಿರಿ. ಓದಿಸಿರಿ.

# ಸಪ್ತಗಿರಿ

ತಿರುಮಲೆ -- ತಿರುಪತಿ ದೇವಸ್ಥಾನಗಳ ಧಾರ್ಮಿಕ ಮಾಸಪತ್ರಿಕೆ ಸಪ್ತಗಿರಿ.

ತೆಲುಗು ತಮಿಳು ಕನ್ನಡ ಹಿಂದಿ ಆಂಗ್ಲ ಭಾಷೆಗಳಲ್ಲಿ ಬೇರೆ ಬೇರೆಯಾಗಿ ಪ್ರಕಟವಾಗುವ ಪತ್ರಿಕೆ.

ಆಧ್ಯಾತ್ಮಿಕ, ಸಾಂಸ್ಕೃತಿಕ, ಧಾರ್ಮಿಕ ವಿಷಯಗಳೊಂದಿಗೆ ವಿಶೇಷಗಳೊಂದಿಗೆ ಪ್ರಕಟವಾಗುವ ಪತ್ರಿಕೆ.

ಸಪ್ತಗಿರಿ ಚಂದಾದಾರರಾಗ ಬಯಸುವವರು ಈ ಕೆಳಗಿನ ಸೂಚನೆಗಳನ್ನು ಗಮನಿಸಬೇಕೆಂದು ಪ್ರಾರ್ಥನೆ.

* ಸಪ್ತಗಿರಿಯ ವಾರ್ಷಿಕ ಚಂದಾ ನಲವತ್ತೆಂಟು ರೂಪಾಯಿಗಳು ಮಾತ್ರ. ಎಷ್ಟು ವರ್ಷದ ಚಂದಾ ಹಣವನ್ನಾದರೂ ತುಂಬಬಹುದು. (ಆಜೀವ ಸದಸ್ಯತ್ವವಿಲ್ಲ)
* ತಮ್ಮ ಚಂದಾ ಹಣವನ್ನು ಸಂಪಾದಕರು, ಸಪ್ತಗಿರಿ, ತಿ.ತಿ.ದೇ. ತಿರುಪತಿ ಇವರ ಹೆಸರಿಗೆ ಎಂ.ಓ./ಡಿ.ಡಿ./ಪಿ.ಓ. ರೂಪದಲ್ಲಿ ಕಳುಹಿಸಿ (ಚೆಕ್‌ಗಳನ್ನು ಅಂಗೀಕರಿಸಲಾಗದು).
* ತಮಗೆ ಯಾವ ಭಾಷೆಯ ಸಪ್ತಗಿರಿ ಬೇಕೆಂಬುದನ್ನು ಸ್ಪಷ್ಟವಾಗಿ ಬರೆಯಿರಿ.
* ತಮ್ಮ ಪೂರ್ಣ ವಿಳಾಸವನ್ನು ಬಿಡಿಬಿಡಿಯಾದ ಅಕ್ಷರಗಳಲ್ಲಿ ಸ್ಪಷ್ಟವಾಗಿ ಬರೆಯಿರಿ. (ಎಂ. ಓ. ಕೂಪನ್ನಿನ ವಿಷಯ ಬರೆಯುವ ಸ್ಥಳದಲ್ಲಿ)
* ಚಂದಾ ಹಣ ತಲುಪಿದ ಮಾರನೆಯ ತಿಂಗಳಿನಿಂದ ಸಪ್ತಗಿರಿಯನ್ನು ಕಳುಹಿಸಲಾಗುವುದು.
* ಚಂದಾ ಹಣವನ್ನು ಕಳುಹಿಸಿದ 30 ದಿನಗಳಲ್ಲಿ ಸಪ್ತಗಿರಿ ತಮಗೆ ಬಾರದಿದ್ದಲ್ಲಿ ತಮ್ಮ ಎಂ.ಓ./ಡಿ.ಡಿ. ಕ್ರಮಸಂಖ್ಯೆ ದಿನಾಂಕ ಮೊದಲಾದ ವಿವರಗಳೊಂದಿಗೆ ಪೂರ್ಣವಿಳಾಸವನ್ನು ನೀಡಿ ಕಾಗದ ಬರೆಯಿರಿ.

ಈ ಮೊದಲೇ ಚಂದಾದಾರರಾದವರಿಗೆ ಸೂಚನೆಗಳು :

* ತಮ್ಮ ಚಂದಾ ಮೊಬಲಗು ಮುಗಿಯುವ ಒಂದು ತಿಂಗಳ ಮೊದಲೇ ಪುನಃ ಚಂದಾಹಣವನ್ನು ಇತರ ಕಾರಣಗಳಿಗಾಗಿ ಬರೆಯುವಾಗ ದಯವಿಟ್ಟು ತಮ್ಮ ಹೊಸ ಸದಸ್ಯತ್ವ ಸಂಖ್ಯೆಯನ್ನು ತಪ್ಪದೇ ತಮ್ಮ ವಿಳಾಸದೊಡನೆ ನಮೂದಿಸಿ ಬರೆಯಿರಿ.

ಸಂಪಾದಕರು :
**ಸಪ್ತಗಿರಿ**
ತಿ.ತಿ.ದೇ., ತಿರುಪತಿ.

**ಕೊಂಡು ಓದಿರಿ. ಕೊಂಡು ಓದಿಸಿರಿ.**

ಯಜಮಾನನಾದವನು ಉಪನಯನ[illegible] ಹಿಂದಿನ ದಿವಸ ವಟು ಮತ್ತು ಪತ್ನಿ ಸಹಿತ ಮಂ[illegible] ಳಸ್ನಾನವನ್ನು ಮಾಡಿ ಪುಣ್ಯಾಹ, ನಾಂದೀ, ಗ್ರ[illegible] ಯಜ್ಞ, ಇಷ್ಟದೇವತಾ ಪೂಜೆ, ಮಂಟಪ ಪೂಜೆ[illegible] ಳನ್ನು ಮಾಡಬೇಕು. ವಟುವಿಗೆ ಜಾತಕರ್ಮಾ[illegible] ಸಂಸ್ಕಾರಗಳು, ಆಗದೆ ಇದ್ದಲ್ಲಿ ಅವುಗಳನ್ನು ಮಾಡಿ[illegible] ಸಂಪ್ರದಾಯವನ್ನನುಸರಿಸಿ ದೇವತಾ ಸಮಾ[illegible] ಧನೆ, ಸುವಾಸಿನೀ ಪ್ರಾರ್ಥನೆ, ಇತ್ಯಾದಿಗಳನ್ನು ನೆ[illegible] ವೇರಿಸಿಕೊಂಡು ಉಪನಯನದ ದಿನಾ ಮಂಗ[illegible] ಸ್ನಾನ ಮಾಡಿ ಮೊದಲು ಚೌಲವನ್ನು ಮಾಡಬೇಕ[illegible] ವಟುವಿಗೆ ವಪನ ಮಾಡಬೇಕು. ಇದರ ಅಂ[illegible] ವಾಗಿ ಮೊದಲು ಚೌಲ ಹೋಮವನ್ನು ಮಾ[illegible] ನಂತರ ವಪನ ಮಾಡಬೇಕು. ವಪನವೆಂದ[illegible] ಆಯುಷ್ಯಕರ್ಮ. ಶಾಸ್ತ್ರದ ಪ್ರಕಾರ ಆಯುಷ್ಯಕ[illegible] ವನ್ನು ಯಾವಾಗೆಂದರೆ ಆಗ ಮಾಡಿಸಿಕೊಳ್ಳಕ[illegible] ಡದು. ತಿಥಿ ವಾರ ನಕ್ಷತ್ರ ಇವುಗಳನ್ನು ನೋ[illegible] ಆಯುಷ್ಯಕರ್ಮವನ್ನು ಮಾಡಿಸಿಕೊಳ್ಳಬೇಕು. ಇ[illegible] ದಿದ್ದರೆ ಆಯುಃಕ್ಷೀಣವಾಗುತ್ತದೆ. ಸ್ನಾನಾನಂತ[illegible] ಕರ್ಮಣಃ ಪುಣ್ಯಾಹವನ್ನು - ಕಂಕಣಧಾರಣೆಯ[illegible] ಮಾಡಿಕೊಂಡು ಉಪನಯನಕ್ಕೆ ಸಂಕಲ್ಪವ[illegible] ಮಾಡಿಕೊಂಡು ಉಪನಯನ ಅಧಿಕಾರ ಸಿದ್ಧಿಗೆ[illegible] ಸ್ಕರ ಆಚಾರ್ಯನಾದ ತಾನೂ ಮತ್ತು ವಟುವ[illegible] ಸಹ ಪ್ರಾಜಾಪತ್ಯ ಕೃಛ್ರತ್ರಯಗಳನ್ನು ಮಾಡಿ ವಟ[illegible] ಪ್ರಾಯಶ್ಚಿತ್ತವನ್ನು ಮಾಡಬೇಕು.

ನಂತರ ನನ್ನ ಮಗನಿಗೆ ಎರಡನೇಯ ಜನ್ಮ[illegible] ಪ್ರಾಪ್ತಿಗಾಗಿ ಯಜ್ಞೋಪವೀತವನ್ನು ಧಾರ[illegible] ಮಾಡಿಸುತ್ತೇನೆ ಎಂದು ಸಂಕಲ್ಪ ಮಾಡಿ ಪೂಜಾ[illegible] ತರ ಬ್ರಾಹ್ಮಣ ಸುವಾಸಿನೀ ಆಶೀರ್ವಾದ ಪಡೆ[illegible] ಬ್ರಾಹ್ಮಣರಿಗೆ ಯಜ್ಞೋಪವೀತ ಗೋಪೀಚಂದ[illegible] ವನ್ನು ದಕ್ಷಿಣ ಸಹಿತವಾಗಿ ಮಾಡಿಸಿ ಅನಂತರ ಆಚ[illegible] ರ್ಯನು ಯಜ್ಞೋಪವೀತವನ್ನು ಮಂತ್ರಪುರಸ್ಸ[illegible] ವಾಗಿ ಧಾರಣೆ ಮಾಡಿ ಆಚಮನವನ್ನು ಮಾಡಿ[illegible] ಬೇಕು.

ಯಜ್ಞೋಪವೀತವೆಂದರೆ ಯಜ್ಞಾರ್ಥಂ - ಉ[illegible] ವೀತಂ ಯಜ್ಞಕ್ಕಾಗಿ ಧರಿಸುವುದು ಎಂದಥ[illegible] ದೇವತೆಗಳನ್ನುದ್ದೇಶಿಸಿ ಮಾಡುವ ಜಪ, ಪೂ[illegible] ಸೋತ್ರ ಹೋಮಾದಿಗಳೂ, ಪಿತೃಗಳನ್ನುದ್ದೇಶಿ[illegible] ಮಾಡುವ ಶ್ರಾದ್ಧ ತರ್ಪಣಾದಿಗಳೂ ಮತ್ತು ದಾ[illegible] ದಿಗಳು ಯಜ್ಞವೆನಿಸಿಕೊಳ್ಳುತ್ತದೆ. "ಉಪಾಸನೇ[illegible] ಗುರೂಣಾಂ ವೃದ್ಧಾನಾಂ ಅತಿಥಿನಾಂ ಹೋಮೇ[illegible] ಜಪ್ಯಕರ್ಮಣಿ ಭೋಜನೇ ಆಚಮನೇ ಯಜ್ಞೋ[illegible] ವೀತೀಸ್ಯಾತ್" ಎಂದು ಆಪಸ್ತಂಬರು ತಮ್ಮ ಧರ್ಮ[illegible] ಸೂತ್ರದಲ್ಲಿ ಹೇಳಿದ್ದಾರೆ. ಆಪಸ್ತಂಬರು--

ಸಹದೇವ ಅಸ್ಮಿಲ್ಲೋಕೆ ಪುರಾಬಭೂವುಃ
ಅಥದೇವಾಃ ಕರ್ಮಭಿಃ
ದಿವಂ ಜನ್ಮ ಆಹೀಯಂತ

ಎಂದಿದ್ದಾರೆ. ಆದಿ ಸೃಷ್ಟಿಯಲ್ಲಿ ಲೋಕಗಳನ್ನು ಸೃಷ್ಟಿಸಿದ ಬ್ರಹ್ಮನು ಭೂಲೋಕದಲ್ಲಿಯೇ ದೇವ, ದಾನವ, ಮನುಷ್ಯರನ್ನು ಮತ್ತು ತಿರ್ಯಗ್ಜಂತುಗಳನ್ನು ಸಹ ಸೃಷ್ಟಿಸಿದನು. ದೇವತೆಗಳು ಯಜ್ಞಾದಿ ಸತ್ಕರ್ಮಗಳಿಂದ ಸ್ವರ್ಗಲೋಕಕ್ಕೆ ಹೋದರು. ಮನುಷ್ಯರು ಇಲ್ಲಿಯೇ ಉಳಿದರು. ಯಜ್ಞೋಪವೀತದ ಅವಶ್ಯಕತೆಯನ್ನು ಧರಿಸಬೇಕಾದ ರೀತಿಯನ್ನು ವೇದಭಾಗವಾದ ಯಜುರಾರಣ್ಯದಲ್ಲಿನ ಸಹವೈ ಎಂಬ ಅನುವಾಕವು ನಮಗೆ ತಿಳಿಸಿಕೊಡುತ್ತದೆ.

ನಿವೀತಂ ಮನುಷ್ಯಾಣಾಂ
ಪ್ರಾಚೀನಾವೀತಂ ಪಿತೃಣಾಂ,
ಉಪವೀತಂ ದೇವಾನಾಂ

ಮನುಷ್ಯ ಸಂಬಂಧವಾದ ಕಾರ್ಯಗಳಲ್ಲಿ ನಿವೀತವನ್ನು, ಉಪವೀತವನ್ನು ದೇವತಾಕಾರ್ಯಗಳಿಗೂ ಮತ್ತು ಪ್ರಾಚೀನಾವೀತವನ್ನು ಪಿತೃಕಾರ್ಯಗಳಲ್ಲಿ ಧರಿಸಬೇಕು. ಹೀಗೆ ಮಾಡುವುದರಿಂದ ಯಜ್ಞಾದಿಗಳು ಪೂರ್ಣ ಫಲವನ್ನು ಕೊಡುತ್ತದೆ.

ಚತುರ್ವೇದೇಷು ಗಾಯತ್ರೀ
ಚತುರ್ವಿಂಶತಿಕಾಕ್ಷರಾ
ತಸ್ಮಾಚ್ಚತುರ್ಗುಣಂ ಕೃತ್ವಾ
ಬ್ರಹ್ಮಸೂತ್ರಮುದೀರಯೇತ್

ನಾಲ್ಕುವೇದಗಳು, ಗಾಯತ್ರೀಯ ಇಪ್ಪತ್ನಾಲ್ಕು ಅಕ್ಷರಗಳುಳ್ಳದ್ದು ಆದುದರಿಂದ 24 X 4 = 96 ತೊಂಬತ್ತಾರು ಸುತ್ತುಗಳಿಂದ ಕೂಡಿದ ಈ ತಂತು ವಿಶೇಷವನ್ನು ಬ್ರಹ್ಮಸೂತ್ರವೆಂದು ಕರೆದಿದ್ದಾರೆ. "ಯಜ್ಞೋಪವೀತಮಿತಿ ಪ್ರಥಮಂ ದಕ್ಷಿಣ ಬಾಹುಮುದ್ಧೃತ್ಯ ಪಶ್ಚಾತ್ ಕಂಠೇ ಧಾರಯೇತ್" ಎಂದು ಶಾಸ್ತ್ರ ಹೇಳುತ್ತದೆ.

ಯಜ್ಞೋಪವೀತದ ರಚನೆಯಲ್ಲಿ ಉಕ್ತವಾದ ಪ್ರತಿಯೊಂದು ಕ್ರಿಯೆಗೂ ಪರೋಕ್ಷವಾದ ಅಂತರಾರ್ಥವಿದೆ ಎಂಬುದು ಗಮನಾರ್ಹ.

"ಊರ್ಧ್ವಂತು ತ್ರಿವೃತಂ ಕಾರ್ಯಂ
ತಂತುತ್ರಯ ಮಧೋವೃತಂ
ತ್ರಿವೃತಂ ಚೋಪವೀತಂ ಸ್ಯಾತ್
ತಸ್ಯೈಕೋ ಗ್ರಂಥಿರುಚ್ಯತೇ"

ಎಂದಿದ್ದಾರೆ ಸ್ಮೃತಿಕಾರರು. ತೊಂಬತ್ತಾರು ಅಂಗುಲದ ಏಕ ಸೂತ್ರವನ್ನು ಮೂರು ಮಡಿಕೆ ಮಾಡಿ ಮೇಲು ಮುಖವಾಗಿ ಹಾಕಬೇಕು. ನಂತರ ಆ ಏಕ ಸೂತ್ರವನ್ನು ಪುನಃ ಮೂರು ಮಡಿಕೆ ಮಾಡಿ "ಬ್ರಹ್ಮಗಂಟು" ಎಂದು ಕರೆಯಿಸಿಕೊಳ್ಳುವ ಪವಿತ್ರ ಗ್ರಂಥಿಯನ್ನು ಹಾಕಿದಾಗ ಇದು ಧಾರಣಯೋಗ್ಯವಾದ ಯಜ್ಞೋಪವೀತವಾಗುವುದು. ಧಾರಣ ಕಾಲದಲ್ಲಿ ಹೇಳುವ ಮಂತ್ರ "ಪ್ರಜಾಪತೇಃ ಯತ್ ಸಹಜಂ" ಎಂಬ ಉಕ್ತಿಯಿಂದ ಯಜ್ಞೋಪವೀತ ಧಾರಣ ಪದ್ಧತಿ ಸೃಷ್ಟಿಕರ್ತನಾದ ಬ್ರಹ್ಮದೇವನ ಕಾಲದಿಂದಲೂ ನಡೆದು ಬಂದ ಒಂದು ಪಾವನ ಪದ್ಧತಿ ಎಂದು ಅರಿಯಬೇಕು.

ತೊಂಭತ್ತಾರು ಅಂಗುಲದ ಈ ಏಕ ಸೂತ್ರದ ತೊಂಭತ್ತಾರು ಎಂಬ ಸಂಖ್ಯೆ ದ್ವಿಜನಿಗೆ ಉಪಾಸ್ಯವಾದ ಅರ್ಹವಾದ ಮಂತ್ರಗಳ ಸಂಖ್ಯೆಯನ್ನು ಸೂಚಿಸುತ್ತದೆ. ಕರ್ಮಕಾಂಡದ ಎಂಬತ್ತು ಸಹಸ್ರಮಂತ್ರಗಳೂ ಉಪಸನಾಕಾಂಡದ ಹದಿನಾರು ಸಹಸ್ರ ಮಂತ್ರಗಳೂ ಒಟ್ಟಿನಲ್ಲಿ ತೊಂಭತ್ತಾರು ಸಾವಿರ ಮಂತ್ರಗಳು ದ್ವಿಜರಿಗೆ ಸಂಬಂಧಿಸಿವೆ. ಇವರಿಗೆ ಮುಖ್ಯವಾಗಿ ಸಂಬಂಧಿಸಿರುವುದು ಕಾಂಡತ್ರಯಗಳಲ್ಲಿ ಕರ್ಮ ಉಪಾಸನಾ ಕಾಂಡಗಳೇ ಪ್ರಮುಖ.

"ಋಗಾನಿ ತ್ರೀಣ್ಯಪಾಕೃತ್ಯ
ಮನೋ ಮೋಕ್ಷ ನಿವೇಶಯೇತ್"

ಎಂದು ಮನುವು ದೇವ, ಋಷಿ ಪಿತೃ ಋಣಗಳನ್ನು ಕಳೆದುಕೊಳ್ಳಲು ಯಜ್ಞೋಪವೀತವು ಉಪಯುಕ್ತವಾಗಿರುತ್ತದೆ ಎಂದು ಹೇಳಿದ್ದಾನೆ.

ಮಾತ್ರಾ ಸಹ ಭೋಜನಕಾಲದಲ್ಲಿ ಆಚಾರ್ಯನು ಮಂತ್ರವನ್ನು ಹೇಳಬೇಕು. ವಟುವು ಪ್ರೋಕ್ಷಣೆ ಪರಿಷೇಚನವನ್ನು ಮಾಡಿ ಆಪೋಶನವನ್ನು ತೆಗೆದುಕೊಂಡು ಪ್ರಾಣಾಹುತಿಗಳನ್ನು ತೆಗೆದುಕೊಂಡು ಮೌನವಾಗಿ ಮಾಡಬೇಕು. ಜನನದಾರಭ್ಯ ಏಳು ವರ್ಷದವರೆಗೆ ಮಗುವನ್ನು ತಾಯಿ ನೋಡಿಕೊಳ್ಳುತ್ತಾರೆ. ಧರ್ಮಶಾಸ್ತ್ರದ ಪ್ರಕಾರ ಏಳು ವರ್ಷಗಳವರೆಗೆ ಬಾಲಕನು ಏನು ತಪ್ಪು ಮಾಡಿದರೂ ಗಣನೆಗೆ ತೆಗೆದುಕೊಳ್ಳಬೇಕಾಗಿಲ್ಲ. ಮಹಾಭಾರತದಲ್ಲಿ ಬರುವ ಮಾಂಡವ್ಯ ಋಷಿಗಳ ಚರಿತ್ರೆಯನ್ನು ಗಮನಿಸಬೇಕು. ಮಾಂಡವ್ಯ ಋಷಿಗಳು ಕೇವಲ ಬಾಲ್ಯದಲ್ಲಿ ಮಾಡಿದ ಒಂದು ತಪ್ಪಿಗೆ, ಯಮನು ಅವರನ್ನು ಶೂಲಕ್ಕೇರುವ ಶಿಕ್ಷೆ ಕೊಟ್ಟಿದ್ದು ಶಾಸ್ತ್ರದ ಪ್ರಕಾರ ತಪ್ಪೆಂದು ಮಾಂಡವ್ಯ ಋಷಿಗಳು ಯಮನಿಗೆ ಶಾಪಕೊಟ್ಟರು. ಉಪನಯನಾನಂತರ ವೇದಾಧ್ಯಯನವೇ ಮುಖ್ಯವಾದ್ದರಿಂದ ಮತ್ತು ಗುರುಕುಲಕ್ಕೆ ಹೋಗುವುದರಿಂದ ಕೊನೆಯ ಸಾರಿ ಮಾತ್ರಾ ಸಹ ಭೋಜನ ನಿಯಮಮಾಡಿದ್ದಾರೆ. ಉಪನಯನದ ಜೊತೆಯಲ್ಲಿ ಚೌಲವನ್ನು ಮಾಡಿದರೆ ಚೌಲದಲ್ಲಿ ವಪನವು ಪ್ರಧಾನವಾಗಿರುವುದರಿಂದ ದಿಗ್ವಪನದ ಅನಂತರ ವಪನವನ್ನು ಮಾಡಿಸಿ, ಉಪನಯನದ ಅಂಗವಾಗಿ ಮಾಡುವ ವಪನದಲ್ಲಿ ನಾಲ್ಕು ದಿಕ್ಕುಗಳಲ್ಲೂ ದರ್ಭೆಗಳನ್ನು ಮಾತ್ರಾ ಕತ್ತರಿಸಬೇಕೆಂದು ಕಾತ್ಯಾಯನರೂ ಹೇಳಿರುವ ವಚನಾನುಸಾರ ಉಪನಯನದಲ್ಲಿ ದಿಗ್ವಪನ ಮಾತ್ರಾ ಮಾಡಿದರೂ ವಪನಮಾಡಿ ದಂತಾಗುತ್ತದೆ. ಅನಂತರ ಕುಮಾರನಿಗೆ ಸ್ನಾನಮಾಡಿಸಿ ಎರಡು ಸಲ ಆಚಮನ ಮಾಡಿಸಬೇಕು. ಕುಮಾರನಿಗೆ ವಪನ ಮಾಡಿದ ಕತ್ತಿಯನ್ನು ತೊಳೆದು ಮೂರು ದಿನ ಆ ಕತ್ತಿಯಿಂದ ಮತ್ತೆ ಯಾರಿಗೂ ವಪನ ಮಾಡದಂತೆ ಇರಿಸಬೇಕು.

ನಂತರದಲ್ಲಿ ಉಪನಯನ ಹೋಮಕ್ಕೆ ಸಂಕಲ್ಪವನ್ನು ಮಾಡಿ ಅಗ್ನಿಪ್ರತಿಷ್ಠೆ ಮಾಡಿ ದೇವಪಾತ್ರೆಗಳ ಜೊತೆಗೆ ಮಾನುಷ ಪಾತ್ರೆಗಳನ್ನು ಒಟ್ಟಿಗೆ ಇರಿಸಬೇಕು ಅವು ಯಾವುವೆಂದರೆ ಮುತ್ತುಗದ ಸಮಿತ್ತು, ದರ್ಭೆ, ನೀರು, ಕೂರ್ಚೀ, ವಸ್ತ್ರ, ಕಲ್ಲು, ಮುತ್ತುಗದ ದಂಡ, ಕೃಷ್ಣಾಜಿನದ ಚೂರು, ಮೌಂಜೀ ಇವುಗಳನ್ನು ಇಟ್ಟು ಅಗ್ನಿಮುಖವನ್ನು ಮಾಡಬೇಕು.

ಆಯುರ್ದಾ ಎಂಬ ಮಂತ್ರದಿಂದ ವಟುವು ಹೋಮವನ್ನು ಮಾಡುವಾಗ ಸ್ವಾಹಾಕಾರವನ್ನು ಹೇಳಬಾರದು. ಬೋಧಾಯನರು ಹೇಳಬೇಕೆನ್ನುತ್ತಾರೆ. ಅದನ್ನು ನಿವಾರಿಸಲು "ಅಧೇಹಿ" ಎಂದು ಎಲ್ಲಿ ಹೇಳಿದ್ದಾರೋ ಅಲ್ಲಿ ಸ್ವಾಹಾಕಾರವಿರುವುದಿಲ್ಲ ಎಂದು ಭಾಷ್ಯಕಾರರು ಹೇಳಿರುತ್ತಾರೆ. ಅಗ್ನಿ ಬ್ರಾಹ್ಮಣರ ಮಧ್ಯದಲ್ಲಿ ಹೋಗಬಾರದೆಂದು ಆಪಸ್ತಂಬರು ಹೇಳಿರುವುದರಿಂದ ವಟುವು ಅಗ್ನಿಗೆ ಉತ್ತರದಲ್ಲಿರುವ ಕಲ್ಲಿನ ಮೇಲೆ ನಿಂತು ಮೌಂಜೀ, ಅಜಿನ, ದಂಡ, ಇವುಗಳನ್ನು ವಟುವು ಧರಿಸಬೇಕು. ಮೌಂಜೀ ಎಂದರೆ ಮುಂಜ ಎಂಬ ಜಾತಿಯ ಹುಲ್ಲಿನಿಂದ ಮಾಡಿದ ಉಡಿದಾರ, ಮೌಂಜೀಯಿಂದ ಮುಂಜಿ ಅರ್ಥಾತ್ ಉಪನಯನ. ಮೌಂಜೀ ಧಾರಣೆಯಿಂದ ಓಜಸ್ಸು ಎಂದರೆ ಶಕ್ತಿ ಕಾಂತಿಯುಂಟಾಗುತ್ತೆ. ಈ ಓಜಸ್ಸು ಸಂಪಾದಿಸುವುದೇ ಮೌಂಜೀ ಧಾರಣೆಯ ಉದ್ದೇಶ. ಈ ದೃಷ್ಟಿಯಿಂದಲೇ ವಿಷ್ಣುವನ್ನು "ಓಜಸ್ತೇಜೋ ದ್ಯುತಿಧರಃ" ಎಂದು ಸಹಸ್ರನಾಮದಲ್ಲಿ ಹೇಳಿರುವುದು.

ಉಪನಯನ ಸಮಯದಲ್ಲಿ ಕೃಷ್ಣಾಜಿನದ ಒಂದು ಸಣ್ಣ ಚೂರನ್ನು ಯಜ್ಞೋಪವೀತಕ್ಕೆ ಸೇರಿಸುತ್ತಾರೆ. ಕೃಷ್ಣಾಜಿನ ಎಂದರೆ ಕೃಷ್ಣಮೃಗ ಅಥವಾ ಜಿಂಕೆಯ ಚರ್ಮ. ಮೃಗಗಳ ಪೈಕಿ ಜಿಂಕೆಯು ಸಾತ್ವಿಕ ಗುಣ

ವುಳ್ಳದ್ದು. ವಟುವಿನ ದೇಹಕ್ಕೆ ಇದರ ಸಂಪರ್ಕದಿಂದ ಸಾತ್ವಿಕ ಗುಣವು ಅಭಿವೃದ್ಧಿಯಾಗಲು ಸಹಾಯಕಾರಿಯಾಗುತ್ತೆ. ಬ್ರಹ್ಮಚಾರಿಗಳಿಗೆ ಕೃಷ್ಣಾಜಿನ ಸನ್ಯಾಸಿಗಳಿಗೆ ವ್ಯಾಘ್ರಾಜಿನ ಹೇಳಲ್ಪಟ್ಟಿದೆ. ಇದಾದ ನಂತರ ಮುತ್ತುಗದ ದಂಡವನ್ನು ವಟುವಿಗೆ ಕೊಡಬೇಕು. ಮುತ್ತುಗ ಅಂದರೆ ಪಲಾಶ ಚಂದ್ರನಿಗೆ ಹೇಳಿರುವ ವೃಕ್ಷ ಚಂದ್ರ ಮನಃಕಾರಕ. ಆದ್ದರಿಂದ ಮುತ್ತುಗದ ಧಾರಣೆಯಿಂದ ಮನಸ್ಸಿನ ಮೇಲೆ ಪ್ರಭಾವ ಬೀರಿ ಆತ್ಮ ಮತ್ತು ಗೋರಕ್ಷಣೆಗೆ ಮಾತ್ರ ಉಪಯೋಗಿಸುವುದಕ್ಕೆ ಪ್ರಚೋದನೆ ಮಾಡುತ್ತದೆ. ಚಂದ್ರ ಸಾತ್ವಿಕಗ್ರಹ ಆದ್ದರಿಂದ ಈ ವೃಕ್ಷವು ಸಹ ಸಾತ್ವಿಕ ಗುಣವುಳ್ಳದ್ದು. ಹೋಮಕ್ಕೂ ಪಲಾಶ, ಸಮಿತ್ತನ್ನು ಉಪಯೋಗಿಸಬೇಕು. ಆ ಸಮಿತ್ತಿನ ಧೂಮವು ಸಹ ಮನಸ್ಸಿನ ಮೇಲೆ ಪ್ರಭಾವ ಬೀರುತ್ತದೆ. ಉಪನಯನ ಕಾಲದಲ್ಲಿ ಕೊಡಲ್ಪಡುವ ಈ ದಂಡವನ್ನು ಗೃಹಸ್ಥಾಶ್ರಮದ ವರೆಗೂ ಬ್ರಹ್ಮಚಾರಿಯು ಇಟ್ಟುಕೊಂಡಿರಬೇಕು. ಗೃಹಸ್ಥಾಶ್ರಮಕ್ಕೆ ಒಂದಾದ ದಂಡವನ್ನು ತನ್ನ ಮತ್ತು ತನ್ನ ಪತ್ನಿಯ ರಕ್ಷಣೆ ಗೋಸ್ಕರ ಉಪಯೋಗಿಸಬಹುದು. ಸನ್ಯಾಸಿಗಳಿಗೆ ಬಿದಿರು ದಂಡವನ್ನು ನಿಯಮಮಾಡಿದ್ದಾರೆ.

ನಂತರ ವಟುವಿನಿಂದ "ಅಧ್ವನಾಮಧ್ವಪತೇ" ಎಂಬ ಮಂತ್ರದ ಆರಭ್ಯ ಉಪನಯನ ಪೂರ್ತಿಯಾಗುವವರೆವಿಗೂ ಮಂತ್ರಗಳನ್ನು ಹೇಳಬೇಕು. ಅಗ್ನಿಗೆ ಉತ್ತರದಲ್ಲಿ ಪ್ರಾಗಗ್ರಗಳಾಗಿ ದರ್ಭೆಯನ್ನು ಹಾಸಿ ಅದರ ಮೇಲೆ ವಟುವು ಪಶ್ಚಿಮ ಮುಖವಾಗಿ ಕುಳಿತು ದೊಗಸೆಯನ್ನು ಮಾಡಬೇಕು. ಅದರ ಮೇಲೆ ಆಚಾರ್ಯನು ಪೂರ್ವಾಭಿಮುಖವಾಗಿ ಕುಳಿತು ತನ್ನ ಅಂಜಲಿಯಲ್ಲಿ ದೇರೆಯವರು ಹಾಕಿದ ನೀರನ್ನು ಆಚಾರ್ಯನು ವಟುವಿನ ಕೈಯಲ್ಲಿ ಬಿಡಬೇಕು. ವಟುವು ಆ ನೀರನ್ನು ಮೂರು ಸಲ ಪ್ರೋಕ್ಷಿಸಿಕೊಳ್ಳುತ್ತಾ "ಸಮುದ್ರಾದೂರ್ಮಿಃ" ಎಂಬ ಮಂತ್ರವನ್ನೂ ಹೇಳಬೇಕು. ಕುಮಾರನನ್ನು ದೇವತೆಗಳು ಕೊನೆಯಲ್ಲಿ ಒಂದು ಸಲ ಅಗ್ನ್ಯಾದಿ ಹತ್ತು ದೇವತೆಗಳಿಗೆ ರಕ್ಷಣೆಗಾಗಿ ಸಮರ್ಪಿಸಬೇಕು. ಅಗ್ನಯೇತ್ವಾಪರಿದದಾಮಿತಿ" ಹನ್ನೊಂದು ಮಂತ್ರಗಳಿಂದ ಹನ್ನೊಂದು ಸಲ ವಟುವಿನ ಬಲಹಸ್ತವನ್ನು ದೇವತೆಗಳಿಗೆ ರಕ್ಷಣೆಗಾಗಿ ಸಮರ್ಪಿಸಬೇಕು.

ಅನಂತರದಲ್ಲಿ ಸುಮುಹೂರ್ತದಲ್ಲಿ ಆಚಾರ್ಯನು ವಟುವನ್ನು ತನ್ನ ತೊಡೆಯಲ್ಲಿ "ದೈವಸ್ಯತ್ವಾ" ಎಂಬ ಮಂತ್ರದಿಂದ ಕುಳ್ಳಿರಿಸಿಕೊಂಡು ಅಂತ್ಯ ಪಟವನ್ನು ಹಿಡಿದು ಚೂರ್ಣಿಕಾ ಮಂಗಳಾಷ್ಟಕಗಳನ್ನು ಪಠಿಸಿ "ಸುಪ್ರಜಾಃ" ಎಂಬ ಮಂತ್ರವನ್ನು ವಟುವಿನ ಬಲಕಿವಿಯೊಳಗೆ ಜಪಿಸಿ, ಸಂಪ್ರದಾಯಾನುಸಾರ ಜೀರಿಗೆ ಬೆಲ್ಲವನ್ನು ಆಚಾರ್ಯನಾದ ತಂದೆ ಮತ್ತು ತಾಯಿ ಕುಮಾರನ ಶಿರಸ್ಸಿನಲ್ಲಿಟ್ಟು, ಪರದೆಯನ್ನು ತೆಗೆದು ಬ್ರಾಹ್ಮಣ ಸುವಾಸಿನಿಯರಿಂದ ಅಕ್ಷತಾಶೀರ್ವಚನವನ್ನು ಮಾಡಿಸಬೇಕು. "ಕೋನಾಮಾಸಿ" ಎಂಬ ಪ್ರಶ್ನೆ ಪ್ರತಿವಚನಗಳನ್ನು ಕೊನೆಯ ಮಂತ್ರವನ್ನು ಹೇಳುವಾಗ "ಪ್ರಾಣಸ್ಯ" "ಬ್ರಹ್ಮ ಚಾರ್ಯಸ್ಮಿ" ಎಂದು ಹೇಳಬೇಕೆಂದು ಅನುಕೂಲ ವ್ಯಾಖ್ಯೆಯಲ್ಲಿ ಹೇಳಿರುತ್ತಾರೆ. ಆಚಾರ್ಯನು "ಯೋಗೇ ಯೋಗೇ" ಎಂಬ ಒಂಬತ್ತು ಮಂತ್ರಗಳನ್ನು ಕುಮಾರನಿಂದ ಹೇಳಿಸಿ "ಇಮಮಗ್ನ ಅಗ್ನಿಷ್ಟೇ" ಎಂಬ ಎರಡು ಮಂತ್ರಗಳನ್ನು ತಾನು ಹೇಳಿ ಹೋಮ ಮಾಡಿಸಬೇಕು.

ವಟುವು ಆಚಾರ್ಯನಿಗೆ ಕೂರ್ಚೆಯನ್ನು ಉತ್ತರಾಗ್ರ ಅಥವಾ ಪೂರ್ವಾಗ್ರವಾಗಿ ಕೊಡಬೇಕು. "ರಾಷ್ಟ್ರಭೃದಸಿ" ಎಂಬ ಮಂತ್ರದಿಂದ ಆಚಾರ್ಯನು ಕುಳಿತುಕೊಳ್ಳಬೇಕು. ವಟುವು ಆಚಾರ್ಯನ ಎದುರಿಗೆ ಕುಳಿತು ಎರಡು ಪಾದಗಳನ್ನು

ತೊಳೆದು ವಸ್ತ್ರದಿಂದ ಒರೆಸಿ ಅರಿಶಿನ, ಕುಂಕುಮ ಮಂತ್ರಾಕ್ಷತೆಗಳಿಂದ ಪೂಜಿಸಿ ಆ ನೀರನ್ನು ತಲೆಯ ಮೇಲೆ ಪ್ರೋಕ್ಷಿಸಿಕೊಂಡು ನಂತರ ತನ್ನ ಬಲ ಗೈಯಿಂದ ಆಚಾರ್ಯನ ಬಲಗಾಲನ್ನು ಹಿಡಿದು ಕೊಂಡು "ಎಲೈ ಗುರುವೇ! ನನಗೆ ಸಾವಿತ್ರಿ ಉಪದೇಶಿಸು" ಎಂದು ಕೇಳುತ್ತಾನೆ. ಅದಕ್ಕೆ ಆಚಾರ್ಯನು ವಟುವಿಗೆ ತತ್ಸವಿತುಃ ಎಂಬ ಗಾಯತ್ರೀ ಮಂತ್ರವನ್ನು ಮೂರು ಪಾದಗಳಾಗಿಯೂ ಅರ್ಧಮಂತ್ರಗಳಾಗಿಯೂ, ಪೂರ್ತಿಯಾಗಿಯೂ, ಮೂರು ಪಾದಗಳ ಮೊದಲಿನಲ್ಲಿಯೂ ವ್ಯಾಹೃತಿಗಳಿಂದ ಕೂಡಿರುವುದಾಗಿಯೂ ಇರುವ ಗಾಯತ್ರೀ ಮಂತ್ರ ಉಪದೇಶವನ್ನು ಮಾಡಬೇಕು. ಆಮೇಲೆ ವಟುವು "ಅಪ್ಯಧಮಸಿ" ಎಂಬ ಮಂತ್ರದಿಂದ ತನ್ನ ಎರಡು ತುಟಿಗಳನ್ನು ಎಡಭಾಗದಿಂದ ಬಲಭಾಗದ ಕಿವಿಯವರೆವಿಗೂ ಬಲಗೈಯಿಂದ (ನೀರಿನಿಂದ) ಸವರಿಕೊಳ್ಳಬೇಕು. ನಂತರ ಮುತ್ತುಗದ ಕೊನೆಯನ್ನು ಬಲಗೈಯಲ್ಲಿ ತೆಗೆದುಕೊಂಡು "ಸುಶ್ರವಃ" ಎಂಬ ಮಂತ್ರವನ್ನು ಹೇಳಬೇಕು. ಪೂರ್ವದಲ್ಲಿ ದೇವತೆಗಳು ಮುತ್ತುಗದ ವೃಕ್ಷದ ಕೆಳಗೆ ವೇದಪಠನಮಾಡಿದರು. ಆ ವೇದಪಾಠವನ್ನು ಮುತ್ತುಗದ ಎಲೆಯೂ ಕೇಳಿದ್ದರಿಂದ ಮುತ್ತುಗದ ಮರಕ್ಕೆ ಸುಶ್ರವಸ್ಸೆಂದು ಹೆಸರು ಬಂದಿತು. ಆದ್ದರಿಂದ ಎಲೈ ಸುಶ್ರವಸ್ಸೇ, ನೀನು ಯಾವರೀತಿ ವೇದಪಾಠವನ್ನು ಕೇಳಿದೆಯೋ ಅದರಂತೆ ನನ್ನನ್ನೂ ಚೆನ್ನಾಗಿ ವೇದಶ್ರವಣ ಮಾಡುವಂತೆ ಮಾಡು. ನೀನು ಯಾವರೀತಿ ಶ್ರವಣ ಸಂಪನ್ನನಾಗಿ ದೇವತೆಗಳ ನಿಧಿರೂಪವಾದ ಯಜ್ಞವನ್ನು ಜುಹ್ವಾದಿ ರೂಪದಿಂದ ಕಾಪಾಡುತ್ತಿದ್ದೀಯೋ ಅದರಂತೆಯೇ ನಿನ್ನ ದಂಡ ಧಾರಣೆಯಿಂದ ಬ್ರಾಹ್ಮಣರ ನಿಧಿಯಾದ ವೇದವನ್ನು ಕಾಪಾಡುವವನಾಗಿ ಆಗುತ್ತೇನೆ ಮತ್ತು ನೀನು ದೇವತೆಗಳ ಮುಖಾಂತರ ವೇದಪಾಠವನ್ನು ಕೇಳಿ ಶ್ರವಣ ಸಂಪನ್ನನಾಗಿ ಆದೆಯೋ, ಅದರಂತೆ ನಾನು ಸಹ ವೇದ ಪಾಠಶ್ರವಣದಿಂದ ಶ್ರವಣ ಸಂಪನ್ನನಾಗುತ್ತೇನೆ ಎಂದು ಆ ಮಂತ್ರಾರ್ಥವು ಇರುತ್ತದೆ.

ನಂತರ "ಸ್ಮೃತಂಚ ಮೇ" ಎಂಬ ಮಂತ್ರಗಳನ್ನು ವಟುವಿನಿಂದ ಹೇಳಿಸಬೇಕು. ವಟುವು ಆಚಾರ್ಯನಿಗೆ ಗುರುದಕ್ಷಿಣೆಯನ್ನು ಕೊಡಬೇಕು. ಆಚಾರ್ಯನು ಹದಿನೇಳು ಸಲ ಪ್ರಾಣಾಯಾಮ ಮಾಡಿ ಅನಂತರ ರುದ್ರನ ಪ್ರೀತಿಗಾಗಿ ವಟುವು ಕೊಡುವ ದಕ್ಷಿಣೆಯನ್ನು ತೆಗೆದುಕೊಳ್ಳಬೇಕು. ನಂತರ "ಉದಾಯುಷಾ" ಎಂಬ ಮಂತ್ರದಿಂದ ಆಚಾರ್ಯನು ಕುಮಾರನನ್ನು ಎಬ್ಬಿಸಿ "ತಚ್ಚಕ್ಷುಃ" ಎಂಬ ಮಂತ್ರದಿಂದ ಸೂರ್ಯೋಪಸ್ಥಾನವನ್ನು ಮಾಡಿಸಬೇಕು. ಉಪನಯನಾಗ್ನಿಯನ್ನು ಬ್ರಹ್ಮಚಾರಿಯು ಮೂರುದಿನಗಳು ಅವಿಚ್ಛಿನ್ನವಾಗಿ ಸಂರಕ್ಷಣೆ ಮಾಡುತ್ತಾ ಪ್ರಾತಃ ಸಾಯಂ ಸಮಿಧಾ ಧಾನವನ್ನು ಆ ಅಗ್ನಿಯಲ್ಲಿ ಮಾಡುತ್ತಾ ಖಾರ ಉಪ್ಪು ಇವುಗಳನ್ನು ತಿನ್ನದೆ ವ್ರತಸ್ಥನಾಗಿರಬೇಕು. ನಂತರ ಅಗ್ನಿಕಾರ್ಯವನ್ನು ಮಾಡಿಸಿ ಆಚಾರ್ಯನು ಕೇಳುವ ಪ್ರಶ್ನೆಗಳಿಗೆ ಕುಮಾರನು ಉತ್ತರಗಳನ್ನು ಕೊಡುತ್ತಾನೆ. ವಟುವು ಗುರುವನ್ನು ತಾಯಿಯನ್ನು ವೃದ್ಧರನ್ನೂ ನಮಸ್ಕರಿಸಿ ಭಿಕ್ಷೆಯನ್ನು ಕೇಳಬೇಕು. ತಾಯಿಯನ್ನೇ ಮೊದಲು ಭಿಕ್ಷೆ ಕೇಳಬೇಕೆಂದು ಬೋಧಾಯನರು ಹೇಳಿರುತ್ತಾರೆ.

ಆಮೇಲೆ ಸಂಪ್ರದಾಯಾನುಸಾರ ಫಲಪೂಜೆ, ಗುರುಪೂಜೆ, ತಾಂಬೂಲಾದಿಗಳನ್ನು ಕೊಡಿಸಿ ವಟುವಿಗೆ ಆಶೀರ್ವಚನವನ್ನು ವೇದ ವಿದ್ವಾಂಸರಿಂದ ಮಾಡಿಸಬೇಕು. ಮೂರು ದಿನಗಳು ಸಂಧ್ಯಾವಂದನೆ ಅಗ್ನಿಕಾರ್ಯವನ್ನು ಮಾಡಿ ನಾಲ್ಕನೇ ದಿವಸ ಪಾಲಾಶ ಹೋಮವನ್ನು ಮಾಡಬೇಕು. ಪಾಲಾಶ ಕರ್ಮ ಪ್ರಕರಣವನ್ನು ಶೌನಕರು ಈ ರೀತಿ ಹೇಳಿದ್ದಾರೆ. ಸಾವಿತ್ರೀ ಜಗದ್ಧಾತ್ರಿ ಮೇಧಾಸ್ವರೂಪಳು. ವಿದ್ಯಾಕಾಮನು ಪ್ರಣವ, ಶ್ರದ್ಧಾಮೇಧಾ ದೇವತೆಗಳ ಪೂಜೆ ಹೋಮವನ್ನು ಮಾಡಬೇಕು. ವೇದಗ್ರಹಣ ಸಾಮರ್ಥ್ಯಕ್ಕಾಗಿ ಉಪನಯನ ಅನಂತರ ಮೇಧಾದೇವಿಯನ್ನು ಪೂಜೆ ಮಾಡಬೇಕೆಂದು ಸಂಗ್ರಹಕಾರರು ಹೇಳಿರುತ್ತಾರೆ. ಕೆಲವರು ಈ ಪಾಲಾಶಕರ್ಮವನ್ನು ಮಾಡುವುದಿಲ್ಲ. ವಟುವಿಗೆ ಬೇರೆ ವಸ್ತ್ರಾದಿಗಳನ್ನು ಧಾರಣೆ ಮಾಡಿಸಿ ಮೌಂಜೀ, ಅಜಿನ, ದಂಡಗಳನ್ನು ಸಹಧಾರಣೆ ಮಾಡಿಸಿ ಪೂರ್ವದಲ್ಲಿ ಆವಾಹನೆ ಮಾಡಿರುವ ದೇವತೆಗಳನ್ನು ವಿಸರ್ಜಿಸಿ, ಕಂಕಣ ವಿಸರ್ಜನೆ, ವಸಂತಮಾಧವ ಪೂಜೆ ಮಾರ್ಜನೆ, ಆರತಿ, ಸಾಯಂಕಾಲ ಅಶ್ವತ್ಥವೃಕ್ಷವಿರುವ ಸ್ಥಳಕ್ಕೆ ಹೋಗಿ ಪೂಜಿಸಿ ದೇವತಾದರ್ಶನಾನಂತರ ಮನೆಗೆ ಒಂದು ಹೆಣ್ಣುಮಕ್ಕಳಿಂದ ಆರತಿ ಮಾಡಿಸಿ ದೇವರಿಗೂ ದೊಡ್ಡವರಿಗೂ ವಟುವು ನಮಸ್ಕರಿಸಬೇಕು. ಋಗ್ವೇದಿಗಳಿಗೆ ಉಪನಯನ ಪ್ರಯೋಗದ ಅನುಪೂರ್ವಿಗಳು ಬೇರೆ ರೀತಿಯಾಗಿರುತ್ತವೆ.

ಅಭಿವಾದನವನ್ನು ದೇವರು, ನದೀ, ಸಭೆ, ವೃಕ್ಷ ಅಗ್ನಿ, ಯತಿ ಇವರಿಗೆ ಭೂಮಿಯಲ್ಲಿ ದಂಡದಂತೆ ಉದ್ದವಾಗಿ ನಮಸ್ಕರಿಸಬೇಕು. ಉಳಿದ ಅರ್ಹರಾದ ಹಿರಿಯರಿಗೆ "ಚತುಸ್ಸಾಗರ ಪರ್ಯಂತಂ" ಹೇಳಿ ನಮಸ್ಕರಿಸಬೇಕು. ನಮಸ್ಕಾರವನ್ನು ಸ್ವೀಕರಿಸಿದವರು "ಆಯುಷ್ಮಾ ಭವ" ಎಂದು ಹೇಳಬೇಕು. ಪ್ರತ್ಯಭಿವಾದವನ್ನು ತಿಳಿಯದ ವಿಪ್ರನಿಗೆ ಪ್ರವರ ಹೇಳಿ ನಮಸ್ಕರಿಸಬಾರದು.

ಅಭಿವಾದ ಕೃತಯಸ್ತು
ನಕರೋತ್ಯಭಿವಂದನಂ
ಅಶಿವಂ ನಾನಕುರುತೇ
ಸಯಾತಿನರಕಾನ್ ಬಹೂನ್

ಎಂದು ಶಾಸ್ತ್ರ ಹೇಳುತ್ತದೆ. ಮಗ, ಶಿಷ್ಯ ಇವರನ್ನು ಬಿಟ್ಟು ಸಮಸ್ತ ವಿಪ್ರರನ್ನು ನಮಸ್ಕರಿಸಬೇಕು. "ಕನಿಷ್ಠಾನಪಿ ವೇದಜ್ಞಾನ್ ಸಂಧ್ಯಾಕಾಲೇಭಿವಾದಯೇತ್" ಎಂದು ಸೂತ್ರಕಾರರು ಹೇಳಿದ್ದಾರೆ. ಗುರುಗಳಿಗೆ ನಮಸ್ಕರಿಸುವಾಗ ತನ್ನ ಎಡಗೈಯಿಂದ ಗುರುಗಳ ಎಡಪಾದವನ್ನು ಬಲಗೈಯಿಂದ ಬಲಪಾದವನ್ನು ಸ್ಪರ್ಶಿಸಿ ನಮಸ್ಕರಿಸಿದರೆ ದೀರ್ಘಾಯುಸ್ಸು ಸ್ವರ್ಗವು ಲಭಿಸುತ್ತದೆ ಎಂದು ಬೋಧಾಯನರು ಹೇಳಿರುತ್ತಾರೆ.

ಅಗ್ನಿಕಾರ್ಯ ಮಾಡುವವನನ್ನು ಅಗ್ನಿಯು ಮೃತ್ಯುವಿನಿಂದ ರಕ್ಷಿಸುತ್ತದೆ. ಆದ್ದರಿಂದ ಪ್ರಾತಃ ಮತ್ತು ಸಾಯಂಕಾಲದಲ್ಲಿ ಅಗ್ನಿಕಾರ್ಯವನ್ನು ಮಾಡಬೇಕು. ಮುತ್ತುಗ, ಅಶ್ವ, ಅತ್ತಿ, ಉತ್ತರೇಣಿ ಇವು ಅಗ್ನಿಕಾರ್ಯಕ್ಕೆ ಉತ್ತಮ ಸಮಿತ್ತುಗಳು, ಅಗ್ನಿಕಾರ್ಯ ಮಾಡುವುದಕ್ಕೆ ಸಮಯ ಮತ್ತು ಅವಕಾಶವಿಲ್ಲದಿರುವಾಗ ಆ ಮಂತ್ರಗಳನ್ನು ಪಾರಾಯಣವಾದರೂ ಮಾಡಬೇಕು. ಉಪಾಕರ್ಮವಾಗುವವರೆವಿಗೂ ಬ್ರಹ್ಮಯಜ್ಞ ಮಾಡುವಾಗ ವೇದದ ಸ್ಥಾನದಲ್ಲಿ ಗಾಯತ್ರೀಯನ್ನು ಜಪಿಸಬೇಕು.

ಸ್ವಗೃಹೋಕ್ತ ವಿಧಾನದಿಂದ ಉಪಾಕರ್ಮವನ್ನು ಮಾಡಿ ವೇದಾಧ್ಯಯನವನ್ನು ಆರಂಭಿಸಬೇಕು. ಉಪಾಕರ್ಮವನ್ನು ಮಾಡದಿದ್ದಲ್ಲಿ ವೇದ ಜಪದ ಫಲವನ್ನು ಮಾನವನು ಹೊಂದುವುದಿಲ್ಲ. ಪ್ರತಿ ಸಂವತ್ಸರದಲ್ಲಿಯೂ ಬ್ರಹ್ಮಚಾರಿಗಳು, ವಾನಪ್ರಸ್ಥರು ಅವಶ್ಯವಾಗಿ ಮಾಡಬೇಕು. ಹೀಗೆ ಮಾಡುವುದರಿಂದ ಎಲ್ಲ ವೇದೋಕ್ತ ಕರ್ಮಗಳು ಸಿದ್ಧಿಸುತ್ತದೆ. ಉಪಾಕರ್ಮದ ದಿನ ಕರ್ಮಾಂಗ ಕ್ಷುರ ಕರ್ಮವನ್ನು ಮಾಡಿಸಿಕೊಳ್ಳುವಾಗ ಬ್ರಹ್ಮಚಾರಿಗಳು ವಾರಾದಿ ದೋಷಗಳನ್ನು ಗಮನಿಸಬೇಕಾಗಿರುವುದಿಲ್ಲ. ವೇದಯುಕ್ತ ಕರ್ಮಗಳು ಪ್ರಾಪ್ತವಾದಾಗ ಕಾಲಾದಿ ದೋಷಗಳನ್ನು ಚಿಂತಿಸಬಾರದೆಂದು ಸಂಗ್ರಹವಚನಕಾರರು ಹೇಳಿರುತ್ತಾರೆ.



ದರ್ಶಿಸಿ ! ಆನಂದಿಸಿ !

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ
# ತಿರುಮಲೆ

# ಬ್ರಹ್ಮೋತ್ಸವ ಕಾರ್ಯಕ್ರಮಗಳು

14-9-96 ರಿಂದ 23-9-96 ವರೆಗೆ





| ದಿನಾಂಕ | ವಾರ | ಹಗಲು ಉತ್ಸವಗಳು | ರಾತ್ರಿ ಉತ್ಸವಗಳು |
|---|---|---|---|
| 14-9-96 | ಶನಿ | -- | ಸೇನಾಧಿಪತಿ ಉತ್ಸವ, ಅಂಕುರಾರ್ಪಣೆ |
| 15-9-96 | ಭಾನು | ತಿರುಚ್ಚಿ ಉತ್ಸವ, ಧ್ವಜಾರೋಹಣ | ದೊಡ್ಡ ಶೇಷವಾಹನ |
| 16-9-96 | ಸೋಮ | ಚಿಕ್ಕಶೇಷವಾಹನ | ಹಂಸವಾಹನ |
| 17-9-96 | ಮಂಗಳ | ಸಿಂಹವಾಹನ | ಮುತ್ತಿನಚಪ್ಪರವಾಹನ |
| 18-9-96 | ಬುಧ | ಕಲ್ಪವೃಕ್ಷವಾಹನ | ಸರ್ವಭೂಪಾಲವಾಹನ |
| 19-9-96 | ಗುರು | ಪಲ್ಲಕಿಯಲ್ಲಿ ಮೋಹಿನೀ ಅವತಾರೋತ್ಸವ | ಗರುಡೋತ್ಸವ |
| 20-9-96 | ಶುಕ್ರ | ಹನುಮದ್ವಾಹನ, ಸ್ವರ್ಣರಥ, ಸಂ|| ವಸಂತೋತ್ಸವ | ಗಜವಾಹನ |
| 21-9-96 | ಶನಿ | ಸೂರ್ಯಪ್ರಭವಾಹನ | ಚಂದ್ರಪ್ರಭವಾಹನ |
| 22-9-96 | ಭಾನು | ರಥೋತ್ಸವ | ಅಶ್ವವಾಹನ |
| 23-9-96 | ಸೋಮ | ಪಲ್ಲಕ್ಕಿ ಉತ್ಸವ, ಚಕ್ರಸ್ನಾನ | ತಿರುಚ್ಚಿಯಲ್ಲಿ ಧ್ವಜಾವರೋಹಣೋತ್ಸವ |

ಈ ಹತ್ತುದಿನಗಳಲ್ಲಿ ತಿರುಮಲೆ ಆಸ್ಥಾನಮಂಟಪದಲ್ಲಿ ಪ್ರಮುಖ ಪಂಡಿತರಿಂದ ಧಾರ್ಮಿಕೋಪನ್ಯಾಸಗಳು, ಪುರಾಣಪ್ರವಚನಗಳು ನಡೆಯುತ್ತವೆ. ಸಂಗೀತ ಕಾರ್ಯಕ್ರಮಗಳು, ಹರಿಕಥೆ, ಭಜನ ಕಾರ್ಯಕ್ರಮಗಳೂ ಜರುಗುತ್ತವೆ.

ತಾವೂ ಬನ್ನಿ ತಮ್ಮವರನ್ನೂ ಕರೆತನ್ನಿ

# ಶ್ರೀಮತ್ ಜಯತೀರ್ಥರು

---ಹಣಮಂತ - ತಾಸಗಾಂವಕರ.

ಶ್ರೀ ಮಧ್ವಃ ಕಲ್ಪವೃಕ್ಷಶ್ಚ
ಜಯಾರ್ಯಾಃ ಸುತಧೇನವಃ
ಚಿಂತಾಮಣಿಸ್ತು ವ್ಯಾಸಾರ್ಯಾಃ
ಮುನಿತ್ರಯಮುದಾಹೃತಂ

ಮಾಧ್ವ ವೇದಾಂತ ಪರಂಪರೆಯಲ್ಲಿ ಅದ್ವಿತೀಯರಾದವರು ಶ್ರೀಮತ್ ಜಯತೀರ್ಥರು. ಮಧ್ವಾಚಾರ್ಯರ ತರುವಾಯ ಅಗ್ರಪೂಜೆ ಇವರಿಗೇ ಸಲ್ಲುತ್ತದೆ.

ಇವರ ವಿದ್ವತ್ ಸಾಧನೆ ಅಸದೃಶ. ಇವರ ಜೀವನ, ಪೂರ್ವಾಶ್ರಮ, ಪೀಠಸ್ಥರಾದ ಬಗ್ಗೆ, ಸಾಧಿಸಿದ ಮಹತ್ಕಾರ್ಯ ಎಲ್ಲವೂ ಅಮೋಘ. ಅಂತೇ ಇವರು ದೇವಾಂಶಸಂಭೂತರು.

ಗುರು ಮಧ್ವರ ಕಾರುಣ್ಯ - ಜಯತೀರ್ಥರಿಗೂ ಮೂರು ಅವತಾರಗಳು. ಇವರು ಇಂದ್ರಾವತಾರಿಗಳು. ದ್ವಾಪರದಲ್ಲಿ ಅರ್ಜುನ, ಕಲಿಯುಗದಲ್ಲಿ ಮಧ್ವಾಚಾರ್ಯರ ಅವತಾರಾವಧಿಯಲ್ಲಿ, ಅವರ ಸರ್ವಮೂಲ ಗ್ರಂಥಗಳನ್ನು ಹೊತ್ತು, ಅಡ್ಡಾಡುವ ಎತ್ತಾಗಿದ್ದವರು. ಮುಂದೆ ಜಯತೀರ್ಥರು ಟೀಕಾಚಾರ್ಯರು.

ದ್ವಾಪರದಲ್ಲಿ ಅಣ್ಣ ಭೀಮಸೇನನ ಉಪಕಾರವನ್ನು ಸ್ಮರಿಸುತ್ತಾನೆ.

ಯುದ್ಧಭೂಮಿಯಲ್ಲಿ ಶ್ರೀಕೃಷ್ಣನ ಭಗವದ್ಗೀತೆಯ ಉಪದೇಶದ ನಂತರ ಅರ್ಜುನ ಇನ್ನೂ ಹೆಚ್ಚಿನ ಉಪದೇಶ ಪಡೆಯಬಯಸಿದ.

ಉಪದೇಕ್ಷ್ಯಂತಿ - ತೇ ಜ್ಞಾನಂ ಜ್ಞಾನಿನಃ, - ಪ್ರಾರ್ಥಿಸಿದ.

ಆಗ ಶ್ರೀಕೃಷ್ಣ ನಗುತ್ತ, ನಿನಗೆ ಹೆಚ್ಚಿನ ವಿದ್ಯೆಯನ್ನು ಕಲಿಯುಗದಲ್ಲಿ, ವಾಯುದೇವರು ತಮ್ಮ ಮೂರನೆಯ ಅವತಾರವಾದ ಮಧ್ವರೂಪದಿಂದ ಉಪದೇಶಿಸುವರು ಎಂದ.

ಅದರಂತೆ - ಮುಂದೆ ಕಲಿಯುಗದಲ್ಲಿ ಮಧ್ವಾವತಾರದಲ್ಲಿ ಎತ್ತಾಗಿ ತೊತ್ತಾಗಿ ಅವರ ಗ್ರಂಥಗಳನ್ನು ಹೊತ್ತು ಸೇವೆಗೈದರು.

ಏಕಾಗ್ರತೆಯಿಂದ ಗುರುಗಳ ವ್ಯಾಖ್ಯಾನ ಶ್ರವಣ ಮಾಡುತಾ ಈ ರೂಪಧಾರಿಗಳಾದರು.

ಅಂತೇ ವಿಜಯದಾಸರು -

ಆನಂದತೀರ್ಥರು ನಿತ್ಯ ಪಠಿಸುವ ಪುಸ್ತಕ ಹೊರುತಿರಲು - ಗುರುರಾಯರು ಹೇಳಿದ ತತ್ವಗ್ರಂಥಗಳ ಕಿವಿಯಲಿ ಕೇಳುತಲಿ ತಲೆಯನು ತೂಗುತಲಿ - ಎಂದಿದ್ದಾರೆ.

ಹೀಗೆ ಅರ್ಜುನ ವೃಷಭರೂಪದಿಂದ ಶ್ರೀ ಮದಾಚಾರ್ಯರ ಮುಂದೆ ಯಾವಾಗಲೂ ಕುಳಿತು ಗುರುಗಳು ಹೇಳುತ್ತಿದ್ದ ತತ್ವಾಮೃತವ ಪಾನಗೈದು ನಂತರ ಏಕಾಂತದಲ್ಲಿ ಮೆಲುಕಾಡಿಸುತ್ತ ಸದಾ ಮನನ ಗೈಯ್ಯುತ್ತ ಗ್ರಂಥಗಳನ್ನು ಬೆನ್ನ ಮೇಲೆ ಹೊತ್ತು ಆರಾಧಿಸುತ್ತಿದ್ದ.

ಆಗೊಮ್ಮೆ ಶಿಷ್ಯಂದಿರೆಲ್ಲ ಸೇರಿ ಗುರುಗಳೇ ತಮ್ಮ ಗ್ರಂಥಗಳು ಗಹನ, ಗಂಭೀರ, ಕ್ಲಿಷ್ಟವಾಗಿವೆ. ಟೀಕೆಯನ್ನು ವ್ಯಾಖ್ಯಾನವನ್ನು ಬರೆದವರಾರು? ಎಂದು ಪ್ರಶ್ನಿಸಿದರು.

ಆಗ ಶ್ರೀ ಮದಾಚಾರ್ಯರು ತಮ್ಮೆದುರು ಧ್ಯಾನ ಚಿತ್ತವಾಗಿ ಕುಳಿತಂಥ ಎತ್ತಿನ ಕಡೆಗೆ ನೋಡಿ - ವ್ಯಾಖ್ಯಾಸ್ಯತಿ ಏಷಃ ಗೋರಾಟ್. ಈ ಎತ್ತು ನಮ್ಮ ಗ್ರಂಥಗಳಿಗೆ ಟೀಕೆ ಬರೆಯುತ್ತದೆ - ಎಂದರು.

ಆಗ ಶಿಷ್ಯೋತ್ತಮರು ಬಹು ಸಂಕಟಪಟ್ಟು ಆ ಕಾರ್ಯ ನಮಗೆ ದೊರೆಯದೇ ಹೋಯಿತಲ್ಲ ಎಂದು ನೊಂದರು.



ಸಹಜವಾಗೇ ಆ ಎತ್ತಿನ ಮೇಲೆ ಸೇಡು ತೀರಿಸಿಕೊಳ್ಳಬಯಸಿ - "ಸರ್ಪದಷ್ಟೋ ಮ್ರಿಯೇತ್" ಅಂದರು.

ಶಾಪದ ಪರಿಣಾಮ ಆ ಎತ್ತು ನೆಲಕ್ಕುರುಳಿ ತದೇಕಚಿತ್ತವಾಗಿ ಶ್ರೀಮದಾಚಾರ್ಯರ ಕಡೆಗೆ ದೈನ್ಯದಿಂದ ದೃಷ್ಟಿ ಹಾಯಿಸಿತು.

ಆಚಾರ್ಯರು ಕರುಣೆಯಿಂದ ನಸುನಗುತ್ತ ತಾವು ರಚಿಸಿದ ಪರಮಾತ್ಮನ ಸ್ತೋತ್ರ ರೂಪವಾದ ದ್ವಾದಶಸ್ತೋತ್ರ ಸವಿಸುತ್ತ ದಯಾದೃಷ್ಟಿ ಬೀರಿ ಮೈಮೇಲೆ ಕೈಯ್ಯಾಡಿಸಿದಾಗ ಎತ್ತಿನ ವಿಷಬಾಧೆ ಕಳೆದು ಉತ್ಸಾಹದಿಂದ ಎದ್ದು ನಿಂತಿತು.

ಆಗ ಶ್ರೀ ಮದಾಚಾರ್ಯರು ಶಿಷ್ಯರನ್ನು ಕರೆದು ಅದರ ಬಳಿ ನಿಲ್ಲಿಸಿ ಆಲಿಸಿರಿ ಅಂದರು.

ಎತ್ತಿನ ಮುಖದಿಂದ ದ್ವಾದಶ ಸ್ತೋತ್ರವು ಇಂಪಾದ ಧ್ವನಿಯಲ್ಲಿ ಕೇಳುತ್ತಿತ್ತು.

ಆನಂದ ಚಂದ್ರಿಕಾ ಸ್ಯಂದಕ ವಂದೇ ಆನಂದ ತೀರ್ಥ ಪರಾನಂದ ವರದ" ಸ್ತೋತ್ರ ಪಠಿಸುತ್ತಿತ್ತು. ಅಂದಿನಿಂದ ಶಿಷ್ಯರೆಲ್ಲ ಆ ಎತ್ತನ್ನು ಗೌರವದಿಂದ ಕಾಣಹತ್ತಿದರು.

ಎತ್ತಿನ ರೂಪದಲ್ಲಿಯ ದೇವೇಂದ್ರ ಮಾನವ ಜನ್ಮ ತಾಳಿ, ವಾಯುದೇವರಾದ ಗುರುಗಳಿಗೆ ಗುರುದಕ್ಷಿಣೆಯಾಗಿ ಅವರ ಗ್ರಂಥಗಳಿಗೆ ವ್ಯಾಖ್ಯಾನ ಬರೆಯ ಬಯಸಿದ.

ಗುರುಗಳ ಆಜ್ಞೆಯಂತೂ ಆಗಿದೆ.

ಶ್ರೀ ಮದಾಚಾರ್ಯರ ಭಾಷ್ಯ ಪ್ರವಚನವನ್ನು ಆಲಿಸಲು ನಿತ್ಯ ಶೇಷದೇವರೂ ಬರುತ್ತಿದ್ದರು. ಹೀಗಾಗಿ ಸರ್ವಮೂಲ ಗ್ರಂಥಗಳನ್ನು ಶ್ರವಣ ಮಾಡಿದ ಶೇಷದೇವರೂ ಗುರುದಕ್ಷಿಣೆ ಕೊಡಲು ಇಚ್ಛಿಸಿದರು.

ಅಂತೇ ದೇವೇಂದ್ರ ಆದಿಶೇಷನಿಂದೊಡಗೂಡಿ ಮಾನವನಾಗಲು ಅಪೇಕ್ಷಿಸಿದ.

### ಕಿಂ ಪಶುಃ ಪೂರ್ವ ದೇಹೇ

ಎತ್ತಿನ ರೂಪದಲ್ಲಿದ್ದ ದೇವೇಂದ್ರ ದೇಶಸ್ಥ ವೈಷ್ಣವ ಬ್ರಾಹ್ಮಣರೂ, ಸಚ್ಚಾರಿತ್ರರೂ ವೀರರೂ,

ಆಪ ಮಂಗಳವೇಡೆ ರಾಜ್ಯದ ಶೂರಸರದಾರ ದೇಶ ಪಾಂಡೆ ಮನೆತನದಲ್ಲಿಯ ಕೂಸು. ಅವತರಿಸಿದರು.

ಇವರು ಮಂಗಳವೇಡೆಯಿಂದ ಮಳಖೇಡವರೆಗೆ ಆಡಳಿತ ನಡೆಸುತ್ತಿದ್ದರು.

ಬ್ರಹ್ಮಣ್ಯ ವ್ರತಾದಿ ಕಠೋರ ನಿಯಮಗಳನ್ನು ಪಾಲಿಸುತ್ತಿದ್ದ ಕೇಶವ ರಘುನಾಥದೇಶಪಾಂಡೆ ಮತ್ತು ಪತ್ನಿ ಸಖೂಬಾಯಿ ದಂಪತಿಗಳ ಸುಪುತ್ರನಾಗಿ ೧೩೪೦ ರಲ್ಲಿ ಜನಿಸಿದರು.

ಅದನ್ನೇ ವ್ಯಾಸವಿಠಲರು ತಮ್ಮ ಕೀರ್ತನೆಯಲ್ಲಿ ಮತ್ತೆ ಪುಟ್ಟಿದ್ದೊ ಮಂಗಳವೇಢೆಯಲಿ ಅಲೆ - ಮಲೆ ವಂತರಲಿ ಎಂದಿದ್ದಾರೆ.

ಮಗುವಿಗೆ ನರಸಿಂಹ ರಘುನಾಥನೆಂದು ನಾಮಕರಣ ಮಾಡಿದರು. ಬಹುಕಾಲದ ನಂತರ ಜನಿಸಿದ ಮಗುವೆಂದು ಪ್ರೀತಿಯಿಂದ ಧೋಂಡು ಎಂದೂ ಕರೆಯುತ್ತಿದ್ದರು. ಶ್ರೀಮಂತ ಮನೆತನ, ರಾಜಕುಮಾರನಂತೇ ಬೆಳೆದ.

ದೊಡ್ಡವನಾದಂತೆ ಧನುರ್ವಿದ್ಯೆ, ಅಶ್ವವಿದ್ಯೆ, ಕತ್ತಿ ವರಸೆ ಕುಸ್ತಿ ಹೀಗೆ ರಾಜೋಚಿತ ವಿದ್ಯೆಗಳನ್ನು ನೀಡಿದರು. ಧೋಂಡೋ ರಘುನಾಥರು ರಣರಂಗದಲ್ಲಿ ಧೀರವೀರವಾಗಿ ಮಾನ್ಯಖೇಡ - ಮಳಖೇಡವನ್ನು ಕಾರ್ಯಕ್ಷೇತ್ರವನ್ನಾಗಿಸಿಕೊಂಡರು.

ಇಪ್ಪತ್ತರ ತರುಣರಾದ ಇವರನ್ನು ತಂದೆತಾಯಿಗಳು ವಿವಾಹ ಬಂಧನದಲ್ಲಿ ಸಿಲುಕಿಸಿದರು. ಇವರಿಗೆ ಇಬ್ಬರು ಮಡದಿಯರೆಂದು ತಿಳಿದು ಬರುತ್ತದೆ.

ಒಮ್ಮೆ ಧೋಂಡೋ ರಘುನಾಥರು ತಮ್ಮ ಸೈನ್ಯದೊಂದಿಗೆ ಮಂಗಳವೇಡೆಯತ್ತ ಪಯಣಿಸುತ್ತಿದ್ದರು. ಭೀಮರಥಿಮ ಮಗ್ಗುಲಿನ ವಿಶಾಲಕಾಡಿನ ಪಯಣ, ಸುಂದರ ತಾಣ, ಬಿಸಿಲಲ್ಲಿ ದಣಿದ ದೇಹ. ಹತ್ತಿದ್ದ ಕುದುರೆಯೊಂದಿಗೇ ಭೀಮರಥಿಯಲ್ಲಿಳಿದರು. ಕುದುರೆಗೆ ನೀರು ಕುಡಿಸಿದರು.

ಸವಾರರಾಗಿದ್ದ ತಾವೂ ಮೇಲೆ ಕುಳಿತು ನದಿಗೇ ಬಾಯಿ ಹಚ್ಚಿ ಕುಡಿಯತೊಡಗಿದರು.

ಅಷ್ಟರಲ್ಲಿ ಧ್ವನಿಯೊಂದು - "ಕಿಂ ಪಶುಃ ಪೂರ್ವದೇಹೇ" ಕೇಳಿ ಬಂತು.

ಧ್ವನಿ ಬಂದತ್ತ ತಲೆಯೆತ್ತಿ ನೋಡಿದಾಗ ಆಚೆಯ ದಂಡೆಯಲ್ಲಿ ತೇಜಃಪುಂಜ ವೃದ್ಧಯತಿ ಯೋರ್ವರು ಮರದ ಕೆಳಗೆ ಆಸೀನರಾಗಿದ್ದರು.

ಅವರು ನೆನಪಿಸಿದ್ದು, - ಹಿಂದಿನ ಜನ್ಮದಲ್ಲಿ ಪಶುವಾಗಿದ್ದೀಯಾ ...... ಸವಾರನನ್ನು ಬಡಿದೆಬ್ಬಿಸಿತು.

ಜನ್ಮಾಂತರ ಸ್ಮರಣೆಯಾಗಿ ಆಗೇಕೆ - ಈಗಲೂ ಪಶುವೇ ಆಗಿ ಬದುಕಿದ್ದೇನೆ. ನನ್ನನ್ನು ಕ್ಷಮಿಸಿರಿ. ಸನ್ಯಾಸ ನೀಡಿರಿ ಎಂದು ದೈನ್ಯಾಸ್ಯದಿಂದ ಯತಿವರ್ಯರ ಪಾದಕಮಲಗಳ ಮೇಲೆ ಹೊರಳಾಡಹತ್ತಿದರು.

ಯತಿವರ್ಯರಾದರೋ ಅಸಾಮಾನ್ಯರು. ಶ್ರೀಮದಾಚಾರ್ಯರಿಂದ ಸನ್ಯಾಸಾಶ್ರಮ ಸ್ವೀಕರಿಸಿದ ದಿಗ್ಗಜ ಪಂಡಿತರಾದ ಅಕ್ಷೋಭ್ಯತೀರ್ಥರು. ಹಂಸನಾಮಕ ಹರಿ ಪರಂಪರೆಯ ಪೀಠಾಧೀಶರು. ಆನೆಗೊಂದಿ ಮಹಾರಾಜರ ರಾಜಗುರುಗಳು.

ಇವರಿಗೆ ಹಿಂದಿನ ದಿನದ ಸ್ವಪ್ನದಲ್ಲಿ, ಮಧ್ವಾಚಾರ್ಯರು ನಾಳೆ ಕುದುರೆಯೇರಿ ನೀರಡಿಸಿ ಬಳಲಿ ಬಂದು ಕುದುರೆ ಮೇಲೆ ಕುಳಿತೇ ನದಿಗೆ ಬಾಯಿ ಹಚ್ಚಿ ಯಾವನು ಕುಡಿಯುವನೋ ಅವನೇ ನಿಮ್ಮ ಉತ್ತರಾಧಿಕಾರಿ.

ಅವನಿಂದ ನಿಮಗೆ ಕೀರ್ತಿ ಬರುತ್ತದೆ. ಎಂದು ಸೂಚಿಸಿದ್ದರು. ಸ್ವಪ್ನವಾಣಿಯಂತೆ ಇದೀಗ ಘಟನೆ ಜರುಗಿದೆ. ನೀರಿನಲ್ಲಿ ನೆನೆದ ತೇಜಸ್ವಿ ತರುಣನನ್ನು ನಖಶಿಖಾಂತ ಅವಲೋಕಿಸಿದರು.

ಇದು ಮಹಾಚೇತನವೆಂದು ಅರಿತರು. ಪಾಂಡಿತ್ಯದ ಪರ್ವತ. ಆಚಾರ್ಯರ ಪ್ರೀತಿಪಾತ್ರರೆಂದು ತಮ್ಮ ದಿವ್ಯದೃಷ್ಟಿಯಿಂದ ಕಂಡು, ಅವನಿಗೆ ಸನ್ಯಾಸ ನೀಡಲು ನಿರ್ಧರಿಸಿದರು.

ಮರುದಿನದ ಪ್ರಾತಃಕಾಲದಲ್ಲಿ ವಿಧಿವತ್ತಾಗಿ ಸನ್ಯಾಸ ಸ್ವೀಕರಿಸಿ ಜಯತೀರ್ಥರೆಂದು ನಾಮಕರಣ ಪಡೆದರು. ಗುರು ಪ್ರದತ್ತಂ ಜಯತೀರ್ಥ ನಾಮ ತಸ್ಮೈ ಯದಾಸೀದನು ರೂಪಮೇವಃ

ಆಧ್ಯಾತ್ಮ ಲೋಕದಲ್ಲಿ ಸರ್ವರಿಗೂ ಮಾರ್ಗದರ್ಶಿಯಾಗು. ಮಧ್ವಮತದ ಜಯಭೇರಿ ಮೊಳಗಿಸು ಎಂದು ಆಶೀರ್ವದಿಸಿದರು.

## ಶೇಷಸ್ವರೂಪರು

ಮಗ ಸನ್ಯಾಸತ್ವ ಸ್ವೀಕರಿಸಿದ್ದು ತಂದೆಗೆ ತಿಳಿದು ಕ್ರೋಧಗೊಂಡು, ಅಕ್ಷೋಭ್ಯತೀರ್ಥರ ಬಳಿ ಬಂದು ಮಗನಿಗೆ ವೈರಾಗ್ಯಮಾರ್ಗ ತೋರಿದ್ದ ಅವರನ್ನು ನಿಂದಿಸಹತ್ತಿದ. ಬಲವಂತವಾಗಿ ಮಗನನ್ನು ಎಳೆದುಕೊಂಡು ಹೋಗಿಯೇ ಬಿಟ್ಟ. ಮನೆಗೆ ಬಂದ ಜಯತೀರ್ಥರು ಸನ್ಯಾಸಿಯಂತೇ ವರ್ತಿಸತೊಡಗಿ, ವಿಕಾರರಹಿತರಾಗಿದ್ದರು. ಸದಾ ಅಂತರ್ಮುಖಿಯಾಗಿರುತ್ತಿದ್ದರು.

ಮೋಹದ ಹೆಂಡತಿ - ಗಂಡನನ್ನರಸುತ್ತ ಶಯ್ಯಾಗೃಹ ಪ್ರವೇಶಿಸಿದಾಗ ಮಂಚದಲ್ಲಿ ಘಟಸರ್ಪ ಕಂಡು ಬೆದರಿದಳು. ಈ ಸನ್ನಿವೇಶವನ್ನು ವಿಜಯದಾಸರು-

"ಹೆಂಡತಿ ಗಂಡನ ಕೂಡಿಸದೇಕೆಂದು
ಸುಮ್ಮನೇ ಕರೆತಂದೂ"

ಪ್ರಚಂಡ ಸರ್ಪದಾ ರೂಪವ ತಾಳ್ದಂದು ಭಯ ಪಟ್ಟಳೆಂದು ಹೇಳಿದ್ದಾರೆ.

ಮನೆಯವರೆಲ್ಲರೂ ಗಾಬರಿಯಲ್ಲಿದ್ದಾಗ ಪಶ್ಚಾತ್ತಾಪ ಹೊಂದಿದ ತಂದೆ ಕೇಶವರಘುನಾಥರಿಗೆ ತಮ್ಮ ತಪ್ಪಿನ ಅರಿವಾಯಿತು.

ಈತನೊಬ್ಬ ಮಹಾ ಸ್ವರೂಪ. ಶೇಷರೂಪಿ ದೇವಪುರುಷ, ನಿಮಿತ್ತ ಮಾತ್ರ ಮಗನಾಗಿ ಜನಿಸಿದವನೆಂದು ನಮಸ್ಕರಿಸಿದರು.

ಆಗ ಮಂಚದ ಮೇಲೆ ಜಯತೀರ್ಥರಿದ್ದರು ಪುನಃ ಕಂಡಾಗ ದೇವರೂಪಿ ಮಗನನ್ನು ಕರೆದೊಯ್ದು ಗುರುಗಳಾದ ಅಕ್ಷೋಭ್ಯತೀರ್ಥರಲ್ಲಿ ಒಪ್ಪಿಸಿ ತಪ್ಪು ಮನ್ನಿಸಿರೆಂದು ಪ್ರಾರ್ಥಿಸಿದರು.

ಪ್ರಸನ್ನವದನರಾದ ಗುರುಗಳು ನಿಮ್ಮ ವಂಶೋದ್ಧಾರಕ್ಕೆ ಇನ್ನೊಬ್ಬ ಮಗ ಜನಿಸುವನೆಂದು ಆಶೀರ್ವದಿಸಿದರು.

ತದನಂತರ ಗುರುಗಳು ಆಚಾರ್ಯರ ಸರ್ವಮೂಲ ಗ್ರಂಥಗಳನ್ನು ಉಪದೇಶಿಸಿದರು. ತಮ್ಮ ಜ್ಞಾನಭಂಡಾರವನ್ನೆಲ್ಲ ಜಯತೀರ್ಥರಿಗೆ ಧಾರೆಯೆರೆದರು.

"ಅಕ್ಷೋಭ್ಯತೀರ್ಥ ಗುರುಣಾ ಶುಕವತ್ ಶಿಕ್ಷಿತಸ್ಯಮೇ". ಶ್ರೀಹರಿ ಸಂಸ್ಥಾನಾಧಿಪತ್ಯದ ಪಟ್ಟಾಭಿಷೇಕವನ್ನೂ ಮಾಡಿದರು.

## ದಿಗ್ವಿಜಯ

ಜಯತೀರ್ಥರು ಸಮಗ್ರ ಸರ್ವಮೂಲ ಉಪದೇಶಹೊಂದಿ, ಜ್ಞಾನ ಪಡೆದರು. ಆ ಗ್ರಂಥಗಳನ್ನು ವಿಶ್ವದಲ್ಲಿ ಪ್ರಸಾರಗೈಯ್ಯಲು, ಪರವಾದಿಗಳಿಗೆ ಸಮರ್ಪಕ ಉತ್ತರಿಸಲು ದೇಶಾದ್ಯಂತ ಪರ್ಯಟನ ಕೈಕೊಂಡರು. ಉಡುಪಿ, ಪಾಜಕ, ಸುಬ್ರಹ್ಮಣ್ಯ ತಿರುಪತಿ, ರಾಮೇಶ್ವರ, ಶ್ರೀರಂಗ, ತಿರುವನಂತಪುರ, ಕಾಶಿ, ಬದರಿ ಅಹಮ್ಮದಾಬಾದ, ಕೊಲ್ಹಾಪುರ ಇವೇ ಮುಂತಾದ ನಗರಗಳಲ್ಲಿ ನಡೆದ ವಿದ್ವತ್ ಸಭೆಗಳಲ್ಲಿ ಚತುಃಶಾಸ್ತ್ರಗಳಲ್ಲಿ ವಾಕ್ಯಾರ್ಥಗೈದು ಜಯಶಾಲಿಗಳಾದರು. ಹೀಗೆ ಪಾಠ ಪ್ರವಚನ ವಾಕ್ಯಾರ್ಥವಾದಿ ನಿಗ್ರಹ ಕೈಕೊಂಡು ತಮ್ಮ ಜೀವಿತೋದ್ದೇಶವಾದ ಮಧ್ವಾಚಾರ್ಯರ ಸರ್ವಮೂಲ ಗ್ರಂಥಗಳಿಗೆ ಟೀಕೆಯನ್ನು ಬರೆಯುವ ಕಾರ್ಯ ಪ್ರಾರಂಭಿಸಲು ನಿಶ್ಚಯಿಸಿದರು.

## ಟೀಕಾಚಾರ್ಯರು

ಭೀಮರಥಿಯ ದಂಡೆಯ ದುರ್ಗಾ ಮಂದಿರದಲ್ಲಿ ಉಗ್ರತಪಗೈದು ಸರಸ್ವತಿ ದೇವಿಯಿಂದ ಅನುಗ್ರಹಿತಗೊಂಡು ಘಂಟಾ ಮತ್ತು ಪೂಗಿ ಫಲಗಳನ್ನು ಸ್ವೀಕರಿಸಿ ಮಳಖೇಡಕ್ಕೆ ಹತ್ತಿರದ "ಯರಗೋಳ" ಗ್ರಾಮದ ಬಳಿಯ ಗುಹೆಯಲ್ಲಿ ಶ್ರೀ ಮುಖ್ಯಪ್ರಾಣ ದೇವರನ್ನು ಆರಾಧಿಸುತ್ತ ಮಧ್ವಾಚಾರ್ಯರ ಗ್ರಂಥಗಳಿಗೆ ಮನನ ಚಿಂತನಗಳ ಮೂಲಕ ಅಪೂರ್ವ ರೀತಿಯಲ್ಲಿ ಟೀಕೆಗಳನ್ನು ರಚಿಸಿದರು.

ಚಿತ್ರೈಃ ಪದೈಶ್ಚ ಗಂಭೀರೈಃ
ವಾಕ್ಯೈರ್ಮಾನೈರಖಂಡಿತೈಃ
ಭಾತಿ ಶ್ರೀ ಜಯತೀರ್ಥ ವಾಕ್

೩,೦೦೦ ಮೂಲಗ್ರಂಥಕ್ಕೆ ೩೦,೦೦೦ ಟೀಕಾಗ್ರಂಥಗಳನ್ನು ರಚಿಸಿದ್ದಾರೆ. (೩೨ ಅಕ್ಷರಗಳಿಗೆ ಒಂದು ಗ್ರಂಥ) ಇವರು ಶ್ರೀಮನ್ನ್ಯಾಯಸುಧಾ ಮಹಾಗ್ರಂಥವನ್ನು ರಚಿಸಿದರು. ಶಬ್ದದಲ್ಲಿ ತತ್ವದಲ್ಲಿ ಮಹತ್ವತೆಯಲ್ಲಿ ಗಾತ್ರದಲ್ಲಿ ಮೇರುಕೃತಿ ವೇದಾಂತ ಸಾಮ್ರಾಜ್ಯದಲ್ಲಿ ದೊರೆಯೊಂದಿಲ್ಲ.

ಸುಧಾ ವಾ ಪಠನೀಯಾ
ವಸುಧಾ ವಾ ಪಾಲನೀಯಾ

ಇವರ ಶೈಲಿ ಅದ್ಭುತ. ಅಸದೃಶ, ಲಲಿತಶೈಲಿ, ನೇರ ಸರಳ ಗಂಭೀರ ಭಾಷೆ. ಸಣ್ಣವಾಕ್ಯಗಳು, ಪ್ರೌಢ ಚಿಂತನೆ, ಪರಿಶುದ್ಧ ವಿವೇಚನೆ, ಸತತ ಪ್ರಮಾಣೋದಾಹರಣೆಗಳು, ಸಮತೂಕದ ವಿಮರ್ಶೆ, ಔಚಿತ್ಯಪೂರ್ಣ ಖಂಡನೆ, ದೃಷ್ಟಾಂತಗಳು ಇವರ ಟೀಕೆಯ ವೈಶಿಷ್ಟ್ಯಗಳು.

ದ್ವೈತ ದರ್ಶನದ ಖಚಿತ ನಿಃಸಂಶಯ ಜ್ಞಾನ ಲಭ್ಯವಾಗಬೇಕಿದ್ದಲ್ಲಿ ಶ್ರೀ ಜಯತೀರ್ಥರ ಅನುಗ್ರಹ ಅವಶ್ಯಕವೆಂದಿದ್ದಾರೆ.

ಇವರ ಮಹಿಮೆ ಅಮೋಘ, ಅಗಾಧ, ಅಪಾರ, ವಿಜಯದಾಸರು - "ಟೀಕಾಚಾರ್ಯರ ಪಾದ ಸೋಕಿದ ಕೊನೆಧೂಳಿ, ತಾಕಿದ ಮನುಜ ಪುಣ್ಯಶಾಲಿ" ಅಂದಿರುವರು.

ಇವರು ಬದುಕಿ ಬಾಳಿದ್ದು ಕೇವಲ ೪೮ ವರ್ಷ. ಇಷ್ಟು ಚಿಕ್ಕ ವಯಸ್ಸಿನಲ್ಲೇ ಮಹಾಸಾಧನ ಗೈದವರು.

ವೇದಾಂತ ಸಾಮ್ರಾಜ್ಯದ ಶಿಖರವನ್ನಾಳಿದ ಟೀಕಾಚಾರ್ಯರು ೧೩೮೮ ರ ಆಷಾಢ ಕೃಷ್ಣ ಪಂಚಮಿಯಂದು ಕಾಗಿನೀತೀರದ ಮಳಖೇಡದಲ್ಲಿ ವೃಂದಾವನ ಪ್ರವೇಶಿಸಿ ತಮ್ಮ ಅವತಾರದ ಸಮಾಪ್ತಗೊಳಿಸಿದರು.

ಇವರ ವೃಂದಾವನ ಸನ್ನಿಧಿಯಲ್ಲಿ ಭಕ್ತವೃಂದ ಪರಿಪರಿಯಿಂದ ನಿತ್ಯ ಭಜಿಸಿ ಆರಾಧಿಸಿ ಅನುಗ್ರಹ ಹೊಂದುತ್ತಿರುವರು.



ದರ್ಶಿಸಿ !

ಆನಂದಿಸಿ !

## ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ
## ತಿರುಮಲೆ

# ನವರಾತ್ರಿ ಬ್ರಹ್ಮೋತ್ಸವ ಕಾರ್ಯಕ್ರಮಗಳು

## 13-10-96 ರಿಂದ 21-10-96 ವರೆಗೆ







| ದಿನಾಂಕ | ವಾರ | ಹಗಲು ಉತ್ಸವಗಳು | ರಾತ್ರಿ ಉತ್ಸವಗಳು |
|---|---|---|---|
| 13-10-96 | ಭಾನು | ತಿರುಚ್ಚಿ ಉತ್ಸವ | ದೊಡ್ಡಶೇಷವಾಹನ |
| 14-10-96 | ಸೋಮ | ಚಿಕ್ಕಶೇಷವಾಹನ | ಹಂಸವಾಹನ |
| 15-10-96 | ಮಂಗಳ | ಸಿಂಹವಾಹನ | ಮುತ್ತಿನ ಚಪ್ಪರವಾಹನ |
| 16-10-96 | ಬುಧ | ಕಲ್ಪವೃಕ್ಷವಾಹನ | ಸರ್ವಭೂಪಾಲವಾಹನ |
| 17-10-96 | ಗುರು | ಮೋಹಿನೀ ಅವತಾರೋತ್ಸವ | ಗರುಡೋತ್ಸವ |
| 18-10-96 | ಶುಕ್ರ | ಹನುಮದ್ವಾಹನ ಸಂ\|\| ಸುವರ್ಣರಥೋತ್ಸವ, ವಸಂತೋತ್ಸವ | ಗಜವಾಹನ |
| 19-10-96 | ಶನಿ | ಸೂರ್ಯಪ್ರಭವಾಹನ | ಚಂದ್ರಪ್ರಭವಾಹನ |
| 20-10-96 | ಭಾನು | ರಜತರಥೋತ್ಸವ | ಅಶ್ವವಾಹನ |
| 21-10-96 | ಸೋಮ | ಪಲ್ಲಕ್ಕಿ ಉತ್ಸವ , ಚಕ್ರಸ್ನಾನ | ತಿರುಚ್ಚಿವಾಹನ, |

ಈ ಹತ್ತು ದಿನಗಳಲ್ಲಿ ತಿರುಮಲೆ ಆಸ್ಥಾನಮಂಟಪದಲ್ಲಿ ಪ್ರಮುಖ ಪಂಡಿತರಿಂದ ಧಾರ್ಮಿಕೋಪನ್ಯಾಸಗಳು, ಪುರಾಣಪ್ರವಚನಗಳು ನಡೆಯುತ್ತವೆ. ಸಂಗೀತ ಕಾರ್ಯಕ್ರಮಗಳು, ಹರಿಕಥೆ, ಭಜನ ಕಾರ್ಯಕ್ರಮಗಳನ್ನು ನಡೆಸಲಾಗುತ್ತದೆ.

ನೀವೂ ಬನ್ನಿ

ನಿಮ್ಮವರನ್ನೂ ಕರೆತನ್ನಿ

# ಮಹಾಭಾರತದ ಕಾಲ ನಿರ್ಣಯ

---ಶ್ರೀ ಆದ್ಯರಾಮಾಚಾರ್ಯ.

ಭಗವಾನ್ ವೇದವ್ಯಾಸರು ತಮ್ಮ ಕಣ್ಣುಂದೆ ನಡೆದುಹೋದ ಎಲ್ಲ ಘಟನೆಗಳನ್ನು ಸ್ವತಃ ಕಂಡು ಅವುಗಳ ನಲಿವು ನೋವುಗಳನ್ನು ಮುಂದಿನ ಸಂತಾನರಿಗೆ ತಿಳುವಳಿಕೆಯ ರೂಪದಲ್ಲಿ ಮಾರ್ಗದರ್ಶನಕ್ಕಾಗಿ ಸಾಧಾರಣ ರೂಪದಲ್ಲಿ ವಿವರಗಳನ್ನೊದಗಿಸಿದ್ದಾರೆ. ಸತ್ಯವತೀ ಪುತ್ರರೂ, ಮಹಾ ತೇಜಸ್ವಿ ಪುರುಷರೂ ಆದ ವ್ಯಾಸರು ಪಾಂಡವರ ಕಥೆಯಲ್ಲಿ ಒಂದು ಲಕ್ಷ ಶ್ಲೋಕಗಳಲ್ಲಿ ಅದನ್ನೊದಗಿಸಿದ್ದಾರೆ. ಮಾತನ್ನು ಮಹಾಭಾರತದಲ್ಲಿ ಕಾಣುವ ಶ್ಲೋಕಗಳಿಂದ ಗುರುತಿಸಬಹುದಾಗಿದೆ.

ಮಹಾಭಾರತದ ಯುದ್ಧವು ಒಂದು ಕುಟುಂಬಕ್ಕೆ ಸೇರಿದ ಹಕ್ಕು ಬಾಧ್ಯತೆಗಳ ಹೋರಾಟದ ಕಥೆ ಎಂದು ಅನೇಕರ ಅಭಿಪ್ರಾಯ. ಈ ಮಾತು ಮೇಲು ನೋಟಕ್ಕೆ ಸರಿ ಎನಿಸಿದರೂ ಮುಂದಿನವರಿಗೆ ಅಂದಿನ ಸತ್ಯನಿಷ್ಠೆ, ಜನಜೀವನ, ಕರ್ಮ ಪ್ರಾಧಾನ್ಯವಾದ ಬದುಕಿನ ಈ ಹೋರಾಟದಿಂದ ನಾವು ಅನೇಕ ವಿಚಾರಗಳನ್ನು ಅರ್ಥಮಾಡಿಕೊಳ್ಳಬಹುದು.

ಮಹಾಭಾರತದ ಯುದ್ಧ ನಡೆದುದು ೨೨ನೇ ನವೆಂಬರ್ ಶುಕ್ರವಾರ ಕ್ರಿಸ್ತಪೂರ್ವ ೩೦೬೭ ನೇ ಇಸವಿಯಲ್ಲಿ. ಇದನ್ನೇ ಯುದ್ಧಾರಂಭದ ದಿನವೆಂದು ಗ್ರಹಿಸಿರುವುದುಂಟು. ಈ ಮಾತಿಗೆ ಸಾಕ್ಷಿಯಾಗಿ ಜ್ಯೋತಿಷ್ಯಶಾಸ್ತ್ರದ ನೆರವನ್ನು ಪಡೆಯಲಾಗಿದೆ. ಸೂರ್ಯ, ಚಂದ್ರ, ರಾಹು, ಶನಿ, ಗುರು ಹಾಗೂ ಮಂಗಳ ಶುಕ್ರರ ಗೋಚಾರ ಸ್ಥಿತಿಯೊಂದಿಗೆ ಭೀಷ್ಮರು ಕೆಳಗುರುಳಿದ ದಿದಂದು ಯಾವ ಗ್ರಹಗಳ ಸ್ಥಿತಿಗಳಿದ್ದವು ಎಂಬುದನ್ನ ಭಗವಾನ್ ವ್ಯಾಸರು ತಪ್ಪದೆ ಮಹಾಭಾರತ ಗ್ರಂಥದಲ್ಲಿ ನಮೂದಿಸಿದ್ದಾರೆ.

ಶ್ರೀಕೃಷ್ಣನು ಉಪಪ್ಲಾವ್ಯ ನಗರದಿಂದ ಪಾಂಡವರ ರಾಯಭಾರಿಯಾಗಿ ಕಾರ್ತೀಕ ಶುಕ್ಲಪಕ್ಷ ದ್ವಾದಶೀ ರೇವತಿ ನಕ್ಷತ್ರದಲ್ಲಿ ಬೆಳಿಗ್ಗೆ ೭-೩೦ ರಿಂದ ೮-೨೪ ರ ಮಧ್ಯದಲ್ಲಿದ್ದ ಮೈತ್ರ ಮಹೂರ್ತದಲ್ಲಿ ತನ್ನ ಪ್ರಯಾಣವನ್ನಾರಂಭಿಸುತ್ತಾನೆ. (ಉದ್ಯೋಗಪರ್ವ ೮೨-೮೩-೮೪) ಭರಣೀ ನಕ್ಷತ್ರವಿರುವಾಗ ಹಸ್ತಿನಾಪುರವನ್ನು ತಲುಪುತ್ತಾನೆ. ಸಂಧಾನದ ಮಂತ್ರಾಲೋಚನೆಗಳು ಪುಷ್ಯ ನಕ್ಷತ್ರದವರೆಗೆ ಸಾಗುತ್ತವೆ. ಮುಂದೆ ೧೫೦ ನೇ ಅಧ್ಯಾಯದಲ್ಲಿ ಕಾಣಬರುವಂತೆ ದುರ್ಯೋಧನನು ಕೃಷ್ಣನ ಸಂಧಾನವನ್ನು ತಿರಸ್ಕರಿಸುತ್ತಾನೆ.

ಕೃಷ್ಣನು ಹಸ್ತಿನಾಪುರವನ್ನು ಬಿಟ್ಟು ಕರ್ಣನೊಂದಿಗೆ ಮಂತ್ರಾಲೋಚನೆ ನಡೆಸಿದುದು ಉತ್ತರ ಫಲ್ಗುನಿಯ ದಿನವಂದು. ಮುಂದೆ ಕೇವಲ ಏಳು ದಿನಗಳಲ್ಲಿ ಅಮಾವಾಸ್ಯೆಯು ಬರುತ್ತದೆ. ಆಗ ಜೇಷ್ಠ ನಕ್ಷತ್ರ ದೇರೆ. ಯುದ್ಧಕ್ಕೆ ಸಿದ್ಧನಾಗಿರಲು ನಿನ್ನ ಮಿತ್ರನಾದ ದುರ್ಯೋಧನನಿಗೆ ತಿಳಿಸು ಎಂದು ಕರ್ಣನಿಗೆ ಕೃಷ್ಣನು ಹೇಳಿ ಹೋಗುತ್ತಾನೆ (ಅಧ್ಯಾಯ ೧೪೨).

ಹಸ್ತಿನಾಪುರದಿಂದ ಶ್ರೀಕೃಷ್ಣ ಉಪಪ್ಲಾವ್ಯ ನಗರಕ್ಕೆ ಮರುಳಿ ಬಂದಾಗ ಚಿತ್ತಾ ನಕ್ಷತ್ರವಿತ್ತು. ಅಲ್ಲಿಂದ ಮೂರು ದಿನಗಳು ಕಳೆದ ಮೇಲೆ ಅನುರಾಧಾ ನಕ್ಷತ್ರವಿರುವಾಗ ಬಲರಾಮನ ಆಗಮನವಾಗುತ್ತದೆ. ಮುಂದೆ ಕೇವಲ ಹದಿನೇಳು ದಿನಗಳ ಮೇಲೆ ಬಲರಾಮನು ತೀರ್ಥಯಾತ್ರೆಗೆಂದು ಹೊರಡುತ್ತಾನೆ. ಆಗ ಪುನರ್ವಸು ನಕ್ಷತ್ರವಿರುತ್ತದೆ. (ಶಲ್ಯ ಅಧ್ಯಾಯ ೩೪) ತನ್ನ ಈ ಯಾತ್ರೆಯಿಂದ ಬಲರಾಮನ ಮರುಳಿ ಬಂದಾಗ ನಲವತ್ತೆರಡು ದಿನಗಳಾಗಿರುತ್ತವೆ. ಆ ವೇಳೆಗಾಗಲೇ ಮಹಾಭಾರತ ಯುದ್ಧವು ಆರಂಭವಾಗಿ ಹದಿನೆಂಟು ದಿನಗಳಾಗಿರುತ್ತದೆ. ಆತನು ಮರಳಿದ ಮಾರನೆಯ ದಿನ ಅಂದರೆ ಹತ್ತೊಂಬತ್ತನೆಯ ದಿನ ಶ್ರವಣ ನಕ್ಷತ್ರದಲ್ಲಿ ದುರ್ಯೋಧನನ ಅವಸಾನವಾಗುತ್ತದೆ. ಈ ಮಹಾಭಾರತ ಯುದ್ಧವು ಮುಗಿದ ನಂತರ ಮುಂದೆ ಮುವತ್ತಾರು ವರುಷಗಳ ಮೇಲೆ ಯಾದವರಲ್ಲಿ ಕಲಹಗಳಾಗಿ ಅವರ ಕುಲವೇ ನಾಶವಾಗಿ ಹೋಗುತ್ತದೆ. (ಮೌಸಲ ಪರ್ವ - ಅಧ್ಯಾಯ-೩).

ಭೀಷ್ಮರ ಮರಣವು ಮಾಘಶುದ್ಧ ಅಷ್ಟಮಿ ರೋಹಿಣಿ ನಕ್ಷತ್ರದ ಮಧ್ಯಾಹ್ನ ಕಾಲದಲ್ಲಾಗುತ್ತದೆ. (ಶಾಂತಿ ಹಾಗೂ ಅನುಶಾಸನ ಪರ್ವ - ೨೭೨-೨೭೪). ಅಂದರೆ ಯುದ್ಧಾರಂಭವಾದ ದಿನದಿಂದ ಮುಂದೆ ಐವತ್ತೆಂಟನೇ ದಿನ ಅವರ ನಿರ್ಯಾಣವಾಗುತ್ತದೆ. ಆ ವೇಳೆಗಾಗಲೇ ಕಲಿಯುಗವು ಆರಂಭವಾಗಿ ಮೂವತ್ತೆಂಟು ವರುಷಗಳಾಗಿರುತ್ತವೆ. ಈ ಮಾತಿಗೆ ಮಹಾಭಾರತದಲ್ಲಿ ಅನೇಕ ಮಾಹಿತಿಗಳು ದೊರೆಯುತ್ತವೆ. ಅದನ್ನೆಲ್ಲ ಅಭ್ಯಾಸ ಮಾಡಿದಾಗ ೧೩ನೇ ಅಕ್ಟೋಬರ್ ಕ್ರಿ.ಪೂ. ೩೧೦೫ ಅಮಾವಾಸ್ಯೆ ಮಂಗಳವಾರ ಜೇಷ್ಠಾ ನಕ್ಷತ್ರದ ದಿನ ಕಲಿಯು ಹುಟ್ಟಿಕೊಂಡನೆಂಬ ನಿರ್ಧಾರಕ್ಕೆ ಬರಲಾಗಿದೆ. ಈ ಕಾಲವನ್ನು ಬಹು ಅಮಂಗಳ ಕಾಲವೆಂದು ವರ್ಣಿಸಲಾಗಿದೆ. ಅನಂತರದಲ್ಲಿನ ಪೌರ್ಣಿಮೆಯ ಚಂದ್ರಗ್ರಹಣದ ದಿನ ಬೆಳಿಗ್ಗೆ ೫ ಗಂಟೆಗೆ ಅಂದರೆ ದಿನಾಂಕ ಕಿ.ಪೂ. ೧೦-೧-೩೧೦೪ ಧನಿಷ್ಠಾ ನಕ್ಷತ್ರದಲ್ಲಿ ಪಂಚಗ್ರಹಗಳಿದ್ದ ಕಾರಣ ದುರ್ಯೋಗವು ಸೂಚಿಸುತ್ತದೆ.

ಧರ್ಮರಾಜನು ರಾಜಸೂಯ ಯಾಗ ಮಾಡಿದ್ದು ಈ ಮಹಾಭಾರತ ಯುದ್ಧಕ್ಕೆ ಹದಿನೈದು ವರುಷ ಮೊದಲು. ಅಂದು ಅಮಾವಾಸ್ಯೆಯ ಸಮಯ ಜೇಷ್ಠಾ ಮೂಲಾ ಸಂಧಿ ಕಾಲದ ದಿನ. ಆ ದಿನವೇ ಪಾಂಡವರು ಮುಂದಾಗುವ ಯುದ್ಧಕ್ಕೆ ಕಾಲ ಬಲಿ ಹಾಗೂ ಯುದ್ಧಾಂಗ ಹೋಮ ಆಚರಿಸುತ್ತಾರೆ.

ಶ್ರೀ ಕೃಷ್ಣನ ಅವತಾರವಾದ ಕಾಲವನ್ನು ಕ್ರಿ.ಪೂ. ೩೧೧೨ ಜುಲೈ ೨೭, ಶುಕ್ರವಾರ ರಾತ್ರಿ ೧೧-೪೦ ಎಂದು ನಿರ್ಧರಿಸಲಾಗಿದೆ. ಅದೇ ರೀತಿ ಯುಧಿಷ್ಠಿರನ ಜನನ ಕಾಲವನ್ನು ಕ್ರಿ.ಪೂ. ೩೧೧೪ ಆಗಸ್ಟ್ ೩೧ ಮಂಗಳವಾರ ಶುಕ್ಲ ಪಂಚಮಿ ಜೇಷ್ಠಾ ನಕ್ಷತ್ರದಲ್ಲಿ ಎಂದು ಹೇಳಲಾಗಿದೆ. ಅಂದರೆ ಯುಧಿಷ್ಠಿರನು ಶ್ರೀ ಕೃಷ್ಣನಿಗಿಂತ ೬೯೬ ದಿನಗಳಷ್ಟು ಹಿರಿಯ. ಭೀಮ ಧರ್ಮರಾಜನಿಗಿಂತ ೩೪೭ ದಿನ ಚಿಕ್ಕವನು. ಭೀಮ ತ್ರಯೋದಶಿ ಮಖಾ ನಕ್ಷತ್ರದಂದು ಜನಿಸಿದವನು. ಅರ್ಜುನನು ಭೀಮನಿಗಿಂತ ೩೦೩ ದಿನಗಳಷ್ಟು ಚಿಕ್ಕವನು. ಆತ ಶುಕ್ಲ ಚತುರ್ಥಿ ಸೋಮವಾರ ಉತ್ತರ ಫಲ್ಗುನೀ ನಕ್ಷತ್ರದಲ್ಲಿ ಜನಿಸಿದವನು.

ಪಾಂಡವರೈವರೂ ಅರಣ್ಯದಲ್ಲಿ ತಂದೆಯನ್ನು ಕಳೆದುಕೊಂಡು ಅನಾಥರಾಗಿ ಹಸ್ತಿನಾವತಿಯಲ್ಲಿ ಕಾಲಿರಿಸಿದಾಗ ಧರ್ಮರಾಜನಿಗೆ ೧೪ ವರುಷ ೯ ತಿಂಗಳು ೧೧ ದಿನಗಳಾಗಿದ್ದವು. ಅಂವರೆ ಜುಲೈ ಕ್ರಿ.ಪೂ. ೩೦೯೯. ಭೀಷ್ಮರು ಧರ್ಮನಿಗೆ ಯುವರಾಜ ಪಟ್ಟ ಕಟ್ಟಿದಾಗ ಆತನಿಗೆ ಇಪ್ಪತ್ತು ವರುಷ ಒಂದು ತಿಂಗಳು ಇಪ್ಪತ್ತಾರು ದಿನಗಳಾಗಿದ್ದವು. ಅಂದರೆ ನವಂಬರ್ ಕ್ರಿ.ಪೂ. ೩೦೯೯. ಮುಂದೆ ಧೃತರಾಷ್ಟ್ರನು ಇವರನ್ನು ಮೋಸದಿಂದ ವಾರಣಾವತಕ್ಕೆ ಕಳುಹಿಸಿದ್ದು ಫಾಲ್ಗುಣ ಶುದ್ಧ ಅಷ್ಟಮಿಾ ರೋಹಿಣೀ ನಕ್ಷತ್ರದಲ್ಲಿ. ನಂತರ ಆರುತಿಂಗಳಗಳ ವರೆಗೆ ಶಾಲಿಹೋತ್ರ ಮುನಿಗಳ ಆಶ್ರಮದಲ್ಲಿದ್ದರು. ಮುಂದೆ ಏಳು ತಿಂಗಳುಗಳವರೆಗೆ ಏಕಶಿಲಾನಗರದಲ್ಲಿ ವಾಸಿಗಳಾಗಿದ್ದರು. ಮುಂದೆ ದ್ರೌಪದಿ ಸ್ವಯಂವರ ನಡೆದುದು ಏಪ್ರಿಲ್ ಕ್ರಿ.ಪೂ. ೩೦೯೧ ರಲ್ಲಿ.

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಶ್ರೀನಿವಾಸ ಮಂಗಾಪುರ.

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ. ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ ೨ ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು. ತಿರುಪತಿ -- ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ.

### ದರ್ಶನ ಹಾಗೂ ಸೇವಾ ವಿವರಗಳು

| ಭಾನು, ಸೋಮ, ಮಂಗಳ, ಬುಧ, ಗುರು ಹಾಗೂ ಶನಿವಾರಗಳ ಕಾರ್ಯಕ್ರಮ. | | ಶುಕ್ರವಾರಗಳಲ್ಲಿ |
|---|---|---|
| ಸುಪ್ರಭಾತ | ಪ್ರಾ 5--00 ಪ್ರಾ 5--30 | ಪ್ರಾ 5--00 ಪ್ರಾ 5--30 |
| ವಿಶ್ವರೂಪ ಸರ್ವದರ್ಶನ | ಪ್ರಾ 5--30 ಪ್ರಾ 6--00 | ಪ್ರಾ 5--30 ಪ್ರಾ 6--00 |
| ತೋಮಾಲ, ಕೊಲುವು | | |
| ಪಂಚಾಂಗಶ್ರವಣ | ಪ್ರಾ 6--00 ಪ್ರಾ 6--30 | ಪ್ರಾ 6--00 ಪ್ರಾ 6--30 |
| ಸಹಸ್ರನಾಮಾರ್ಚನೆ | ಪ್ರಾ 6--30 ಪ್ರಾ 7--00 | ಪ್ರಾ 6--30 ಪ್ರಾ 7--00 |
| ಮೊದಲನೇ ಗಂಟೆ | ಪ್ರಾ 7--00 ಪ್ರಾ 7--30 | ಪ್ರಾ 7--00 ಪ್ರಾ 7--30 |
| ಸರ್ವದರ್ಶನ | ಪ್ರಾ 7--30 ಪ್ರಾ 10--00 | *ಅಭಿಷೇಕ ಪ್ರಾ 7--30 ಪ್ರಾ 8--30 |
| | | ಸಮರ್ಪಣ ಪ್ರಾ 8--30 ಪ್ರಾ 9--30 |
| 2ನೇ ಅರ್ಚನೆ | | |
| 2ನೇ ಗಂಟೆ | ಪ್ರಾ 10--00 ಪ್ರಾ 10--30 | ಪ್ರಾ 9--30 ಪ್ರಾ 10--30 |
| *ಆರ್ಜಿತ | | ಕಲ್ಯಾಣೋತ್ಸವ ಪ್ರಾ 10--30 ಮ 12--00 |
| ಸರ್ವದರ್ಶನ | ಪ್ರಾ 10--30 ಸಂ 6--30 | ಪ್ರಾ 10--30 ಸಂ 6--30 |
| ರಾತ್ರಿ ಕೈಂಕರ್ಯ | | |
| ರಾತ್ರಿ ಗಂಟೆ | ಸಂ 6--30 ರಾ 7--00 | ಸಂ 6--30 ರಾ 7--00 |
| ಸರ್ವದರ್ಶನ | ರಾ 7--00 ರಾ 8--45 | ರಾ 7--00 ಪ್ರಾ 8--45 |
| ಏಕಾಂತ ಸೇವೆ | ರಾ 8--45 ರಾ 9--00 | ರಾ 8--45 ರಾ 9--00 |

| | |
|---|---|
| * ಆರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ. 200--00 |
| * ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ. 100--00 |
| ಅರ್ಚನೆ (ಒಂದು ವರ್ಷ) | ರೂ. 42--00 |
| ಶಾಶ್ವತ ನಿತ್ಯಾರ್ಚನೆ | ರೂ. 542--00 |

ಇಂದ್ರಪ್ರಸ್ಥದ ನಿರ್ಮಾಣ ಹಾಗೂ ಅಲ್ಲಿ ರಾಜ್ಯಾಭಿಷೇಕ ನಡೆದುದು ನವೆಂಬರ್ ಕ್ರಿ.ಪೂ. ೩೦೯೧ರಲ್ಲಿ. ಅನಂತರ ಒಂಭತ್ತು ವರುಷಗಳ ನಂತರ ರಾಜಸೂಯ ಯಾಗಮಾಡುತ್ತಾರೆ. ಈ ಒಂಭತ್ತು ವರುಷಗಳ ಕಾಲಾವಧಿಯಲ್ಲಿಯೇ ಅರ್ಜುನನು ಐದು ವರುಷ ಆರು ತಿಂಗಳುಗಳ ಕಾಲ ದಿಗ್ವಿಜಯ ಯಾತ್ರೆ ಮಾಡಿದ್ದಾನೆ. ಅರ್ಜುನ ಹಾಗೂ ಸುಭದ್ರೆಯ ವಿವಾಹವಾದುದು ಏಪ್ರಿಲ್ ಕ್ರಿ.ಪೂ. ೩೦೮೪. ಆಮೇಲೆ ಮೂರು ತಿಂಗಳುಗಳಲ್ಲಿ ಖಾಂಡವವನ ದಹನ ಜುಲೈ ೩೦೮೪. ಅಭಿಮನ್ಯುವಿನ ಜನನ ಫೆಬ್ರವರಿ ಕ್ರಿ.ಪೂ. ೩೦೮೨. ರಾಜಸೂಯ ಯಾಗ ಆರಂಭ ಮಾಡಿದ್ದು ನವಂಬರ್ ೩೦೮೩ರಲ್ಲಿ. ದ್ಯೂತ ಹಾಗೂ ವನವಾಸದ ದಿನಗಳ ಆರಂಭವು ನವಂಬರ್ ೩೦೮೧. ಮಾರ್ಗಶೀರ್ಷ ಶುಕ್ಲಪಕ್ಷದಲ್ಲಿ. ಹನ್ನೆರಡು ವರುಷ ವನವಾಸ, ಒಂದು ವರುಷ ಅಜ್ಞಾತವಾಸ, ಹದಿಮೂರು ಚಾಂದ್ರ ವರುಷ. ಅದರಲ್ಲಿ ಐದು ಚಾಂದ್ರಮಾಸಗಳು ಹನ್ನೆರಡು ದಿನ ಅಥವಾ ಹದಿಮೂರು ಸೌರವರ್ಷ. ಹೀಗಾಗಿ ಹದಿನೆಂಟು ದಿನಗಳು ಹೆಚ್ಚಿನ ಕಾಲ. ಇದರಿಂದಾಗಿಯೇ ದುರ್ಯೋಧನನ ಲೆಕ್ಕವು ತಪ್ಪಾಗುತ್ತದೆ. ಅದನ್ನೇ ಭೀಷ್ಮರು ಆತನಿಗೆ ಎಚ್ಚರಿಕೆ ಕೊಡುತ್ತಾರೆ.

ಮಹಾಯುದ್ಧ ೨೨ ನವಂಬರ್ ೩೦೬೭ ಶುಕ್ರವಾರ ಕೃತ್ತಿಕಾ ನಕ್ಷತ್ರದಲ್ಲಿ ಆರಂಭ. ಹದಿನೆಂಟು ದಿನ ಯುದ್ಧ ನಡೆದು ಅದರಲ್ಲಿ ಪಾಂಡವರಿಗೆ ಜಯ. ಧರ್ಮರಾಜ ಪಟ್ಟಾಭಿಷಿಕ್ತನಾಗಿ, ಮೂವತ್ತಾರು ವರುಷಗಳ ಕಾಲ ರಾಜ್ಯಭಾರವನ್ನು ಮಾಡುತ್ತಾನೆ.

ಧರ್ಮರಾಜನ ರಾಜ್ಯಭಾರವು ಆರಂಭವಾದ ಮೇಲೆ ಹದಿನೈದು ವರುಷಗಳಾದ ನಂತರ ಧೃತರಾಷ್ಟ್ರ, ಗಾಂಧಾರಿ, ವಿದುರ, ಕುಂತಿ ಹಾಗೂ ಸಂಜಯ ಇವರುಗಳೆಲ್ಲ ತಮ್ಮ ಆತ್ಮಶ್ರಾದ್ಧಗಳನ್ನು ಮುಗಿಸಿಕೊಂಡು ವಾನಪ್ರಸ್ಥಾಶ್ರಮವನ್ನು ಸ್ವೀಕರಿಸುತ್ತಾರೆ. ಮುಂದೆರಡು ವರುಷಗಳ ನಂತರ ಧೃತರಾಷ್ಟ್ರ, ಗಾಂಧಾರಿ, ಕುಂತಿ ಇವರು ಕಾಡುಗಿಚ್ಚಿಗೆ ಸಿಕ್ಕಿಹಾಕಿಕೊಂಡು ಮರಣ ಹೊಂದುತ್ತಾರೆ.

ಶ್ರೀ ಕೃಷ್ಣನ ಪರಂಧಾಮ ನಿರ್ಗಮನವು ಶುಕ್ರವಾರ ೧೩ ನೇ ಏಪ್ರಿಲ್ ಕ್ರಿ.ಪೂ. ೩೦೩೧. ಅನಂತರ ಮುಂದೆ ಪಾಂಡವರು ನವಂಬರ್ ಕ್ರಿ.ಪೂ. ೩೦೩೧ರಲ್ಲಿ ತಮ್ಮ ಮಹಾಪ್ರಸ್ಥಾನವನ್ನು ಬೆಳೆಸುತ್ತಾರೆ.

ಈ ವಿಚಾರಗಳನ್ನೆಲ್ಲ ಶ್ರೀ ಕೆ. ಶ್ರೀನಿವಾಸ ರಾಘವನ್ ಹಾಗೂ ವಾಸುದೇವ ಅಗರವಾಲ ಮತ್ತು ಸೌರಾಷ್ಟ್ರದ ವಿದ್ಯಾಪೀಠದ ಕುಲಪತಿಗಳಾಗಿದ್ದ ಶ್ರೀ ಡಿ.ಆರ್. ಪಂಡಿತ ಮೊದಲಾದವರು ತಮ್ಮ ಸಂಶೋಧನೆಗಳಿಂದ ಪ್ರಕಟಪಡಿಸಿರುತ್ತಾರೆ. ಇದರಿಂದಾಗಿ ಮಹಾಭಾರತ ಯುದ್ಧವಂತೂ ಖಂಡಿತವಾಗಿ ನಡೆಯಿತೆಂಬ ಮಾತಿನಲ್ಲಿ ಯಾವ ಸಂಶಯಗಳಿರುವುದಿಲ್ಲ. ❖

# ನಂಬಿಕೆ! ದಾರಿ ವೈಕುಂಠಕೆ

---"ಕೈಪ್ರ" ಲಕ್ಷ್ಮೀನರಸಿಂಹಶಾಸ್ತ್ರಿ.

ಬಹಳಷ್ಟೇ ಪುರಾತನ ಕಾಲದ ಮಾತು. ಅಂದಿಗೆ ಕಾಶಿಯು ಈಗಿನಂತೆ ಜನನಿಬಿಡವಾದ ಪಟ್ಟಣವಾಗಿರಲಿಲ್ಲ; ಕೇವಲ ಸಿದ್ಧಪುರುಷರೂ ತಪಸ್ವಿಗಳೂ ಭಕ್ತರೂ ವಾಸಿಸುವ ಆನಂದ ಕಾನನವಾಗಿತ್ತು. ಅಲ್ಲಿ ಒಂದು ಬ್ರಾಹ್ಮಣ ಕುಟುಂಬವಿತ್ತು. ಸತಿ - ಪತಿಗಳಿಬ್ಬರೂ ದೈವಭಕ್ತರು. ಆದರೆ ಕಾಶಿಯಲ್ಲೇ ವಾಸಿಸಿದ್ದರೂ ಆ ಬ್ರಾಹ್ಮಣನು ಗಂಗಾನದಿಯಲ್ಲಿ ಸ್ನಾನ ಮಾಡುತ್ತಿರಲಿಲ್ಲ. ಗಂಗೆಯಲ್ಲಿ ಸ್ನಾನ ಮಾಡಿದವರು ಮುಕ್ತರಾಗಿ ವೈಕುಂಠಕ್ಕೆ ಹೋಗುತ್ತಾರೆ - ಎಂದು ಆತನು ಧೃಢವಾಗಿ ನಂಬಿದ್ದುದೇ ಇದಕ್ಕೆ ಕಾರಣ. ಈ ಬಗ್ಗೆ ಆತನ ಪತ್ನಿಗೆ ಬಹಳ ಖೇದವಾಗಿತ್ತು. ಗಂಗಾಸ್ನಾನ ಮಾಡುವಂತೆ ಗಂಡನನ್ನು ಪರಿಪರಿಯಾಗಿ ಒತ್ತಾಯ ಮಾಡುತ್ತಿದ್ದಳು, ಜಗಳವಾಡಿದ್ದೂ ಉಂಟು. ಬ್ರಾಹ್ಮಣನದು ಒಂದೇ ಉತ್ತರ - "ನಾನು ಮಾಡುವುದಿಲ್ಲ. ಏಕೆಂದರೆ ಗಂಗಾಸ್ನಾನ ಮಾಡಿದವರು ಮುಕ್ತರಾಗುವುದು ನಿಶ್ಚಯ. ನಾನು ಮುಕ್ತನಾಗಿ ವೈಕುಂಠಕ್ಕೆ ಹೋಗಿಬಿಟ್ಟರೆ ನಿನ್ನನ್ನು ನೋಡುವವರು ಯಾರು?" - ಎನ್ನುತ್ತಿದ್ದ. ಇದನ್ನು ಕೇಳಿ ಆಕೆಗೆ ನಗೆ ಉಕ್ಕಿ ಬರುತ್ತಿತ್ತು - "ಏನು ಮಾತಾಡ್ತೀರಿ. ನಿತ್ಯವೂ ಎಷ್ಟೊಂದು ಜನ ಗಂಗೆಯಲ್ಲಿ ಸ್ನಾನ ಮಾಡುತ್ತಿದ್ದಾರೆ, ಯಾರೂ ಮುಕ್ತರಾಗಲಿಲ್ಲ. ನೀವೊಬ್ಬರು ಮಾತ್ರ ಮುಕ್ತರಾಗಿಬಿಡುತ್ತೀರಿ - ಅಲ್ಲವೆ? ತುಂಬ ವಿಚಿತ್ರ!" - ಎನ್ನುತ್ತಿದ್ದಳು. ಏನೇ ಹೇಳಲಿ, ಬ್ರಾಹ್ಮಣ ಬಗ್ಗಲೇ ಇಲ್ಲ. ಆಯುಷ್ಯದ ಬಹುಭಾಗ ಹೀಗೆಯೇ ಕಳೆದುಹೋಯಿತು.

ಒಂದು ಸಲ ಪರಮಪವಿತ್ರವಾದ ಚೂಡಾಮಣಿಯೋಗ ಬಂದಿತು. ಎಷ್ಟೋ ವರ್ಷಗಳಿಗೊಮ್ಮೆ ಪ್ರಾಪ್ತವಾಗುವ ಸುಯೋಗವಿದು. ದೂರದೇಶಗಳಿಂದ ಲಕ್ಷಗಟ್ಟಲೆ ಜನ ಬಂದು ಗಂಗೆಯಲ್ಲಿ ಸ್ನಾನ ಮಾಡುತ್ತಿದ್ದಾರೆ. ಇಂತಹ ಸಂದರ್ಭವನ್ನು ತಪ್ಪಿಸಿಕೊಳ್ಳಲು ಆ ಗೃಹಿಣಿ ಸಿದ್ಧವಿರಲಿಲ್ಲ. ತನ್ನ ಗಂಡ ಬಡಪೆಟ್ಟಿಗೆ ಬಾಗುವುದಿಲ್ಲ ವೆಂದು ಆಕೆಗೆ ಗೊತ್ತು. ದೃಢ ನಿಶ್ಚಯ ಮಾಡಿ ಗಂಡನಿಗೆ ಹೇಳಿದಳು - "ಈ ದಿನ ನೀವು ಗಂಗಾಸ್ನಾನ ಮಾಡಲೇ ಬೇಕು, ಆದದ್ದಾಗಲಿ" - ಎಂದಳು. ಬ್ರಾಹ್ಮಣ ಒಪ್ಪದೆ ಏನೇನೋ ನೆಪ ಒಡ್ಡಿದ - "ಬೇಡ ಕಣೇ, ಇನ್ನೂ ನನಗೆ ವಯಸ್ಸಿದೆ; ಸಂಸಾರದಲ್ಲಿ ಮಾಡಿ ಮುಗಿಸಬೇಕಾಗಿರುವ ಹೊಣೆಗಾರಿಕೆಗಳಿವೆ. ಹೀಗಿರುವಾಗ ನಾನು ಈಗಲೇ ಗಂಗಾಸ್ನಾನ ಮಾಡುವುದು ಬೇಡ. ನಾನು ಮುಕ್ತನಾಗಿ ವೈಕುಂಠಕ್ಕೆ ಹೊರಟುಹೋದರೆ ಕುಟುಂಬ ನಿರ್ವಹಣೆ ಮಾಡುವವರು ಯಾರು?" - ಎಂದ. ಆಕೆಗೆ ಮತ್ತೊಮ್ಮೆ ನಗೆ ಬಂದಿತು - "ಕುಟುಂಬದ ಚಿಂತೆ ನಿನಗೆ ಬೇಡ. ಇಷ್ಟಕ್ಕೂ ನೀವು ಮುಕ್ತರಾಗಿಬಿಟ್ಟಿದ್ದಾದರೆ ನನ್ನ ಹಣೆಯಲ್ಲಿ ಬರೆದಿದ್ದಂತಾಗಲಿ. ಮತ್ತೇನು ಹೇಳಿದರೂ ನಾನು ಕೇಳುವವಳಲ್ಲ. ನೀವು ಗಂಗಾಸ್ನಾನಕ್ಕೆ ಈಗ ಹೋಗಲೇ ಬೇಕು" ಎಂದು ಪಟ್ಟು ಹಿಡಿದಳು.

ಬ್ರಾಹ್ಮಣ ನಿರುಪಾಯನಾದ. ತನ್ನ ಪತ್ನಿ ತಾನಾಗಿಯೇ ಎಲ್ಲಕ್ಕೂ ಸಿದ್ಧಳಾಗಿ ಒಪ್ಪಿಗೆಯಿತ್ತು ಕಳುಹಿಸಿಕೊಡುತ್ತಿರುವಾಗ ತಾನೇಕೆ ಅಲ್ಲವೆನ್ನಬೇಕು? ತಾನು ಮುಕ್ತನಾಗುವುದಂತೂ ನಿಶ್ಚಯವಾಯಿತು. ಯಾರಿಗೆ ಏನು ಕೊಡಬೇಕೋ ಎಲ್ಲ ಸಾಲಗಳನ್ನೂ ಬ್ರಾಹ್ಮಣ ಸಂದಾಯ ಮಾಡಿದ; ಉಳಿದುದನ್ನು ಪತ್ನಿಗೆ ಒಪ್ಪಿಸಿದ. ಎಲ್ಲರಿಂದ ಬೀಳ್ಕೊಂಡು ಗಂಗಾನದಿಯ ಸ್ನಾನಕ್ಕೆ ಹೊರಟ.

ಭಕ್ತನಾದ ಆ ಬ್ರಾಹ್ಮಣ ವಿಧಿಪೂರ್ವಕವಾಗಿ ಸಂಕಲ್ಪಮಾಡಿ, ಗಂಗಾಸ್ನಾನ ಮಾಡಿದ. ಹಲವು ಬಾರಿ ಗಂಗೆಯಲ್ಲಿ ಮುಳುಗಿ ಎದ್ದ. ಸ್ನಾನ ಮುಗಿಯುತ್ತಿದ್ದಂತೆಯೇ ತಾನು ಮುಕ್ತನಾಗುವೆನೆಂದು ಆತನ ನಂಬಿಕೆ. ಆದರೆ ಸ್ನಾನ ಮುಗಿಯಿತು; ಆತನು ಸ್ನಾನಕ್ಕಾಗಿ ನದಿಯೊಳಕ್ಕೆ ಇಳಿದಾಗ ಹೇಗಿದ್ದನೋ, ಸ್ನಾನ ಮುಗಿಸಿ ಘಟ್ಟಕ್ಕೆ ಬಂದಾಗಲೂ ಹಾಗೆಯೇ ಇದ್ದ. ಆತನಿಗೆ ದುಃಖವಾಯಿತು; ವಿಸ್ಮಯ ಪಡುತ್ತ ಆಲೋಚಿಸಿದ - "ನಾನು ಗಂಗಾಸ್ನಾನ ಮಾಡಿದರೂ ಮುಕ್ತನಾಗದೆ ಇದ್ದಂತೆಯೇ ಇದ್ದೇನಲ್ಲ! ಹಾಗಾದರೆ ಧರ್ಮಶಾಸ್ತ್ರಾದಿಗಳಲ್ಲಿ ಹೇಳಿದ್ದು ಸುಳ್ಳಾಗಬೇಕೆ? ಏನೇ ಇರಲಿ, ನಾನು ಗೃಹದ ಸಂಬಂಧ ತ್ಯಜಿಸಿ ಬಂದಿದ್ದೇನೆ. ಈಗ ಭಂಗಪಟ್ಟುಕೊಂಡು ಮನೆಗೆ ಹೋಗಲಾರೆ, ಪತ್ನಿಗೆ ಮುಖತೋರಿಸಲಾರೆ. ಗಂಗಾ ಸ್ನಾನದಿಂದ ಮುಕ್ತಿ ದೊರೆಯುವುದೆಂಬ ಶಾಸ್ತ್ರ ಸಮ್ಮತವಾದ ಸತ್ಯಕ್ಕೆ ನನ್ನಿಂದ ಚ್ಯುತಿ ಬರಕೂಡದು" — ಹೀಗೆಲ್ಲ ಯೋಚಿಸುತ್ತಿರುವಾಗ ಅದೇ ಮಾರ್ಗದಲ್ಲೇ ನಾರದ ಮುನಿಗಳು ಕಾಣಿಸಿದರು. ಬ್ರಾಹ್ಮಣ ಭಕ್ತ ಅವರಿಗೆ ಸಾಷ್ಟಾಂಗ ನಮಸ್ಕಾರ ಮಾಡಿ ಪ್ರಶ್ನಿಸಿದ - "ಮಹರ್ಷಿ, ಗಂಗಾಸ್ನಾನ ಮಾಡಿದವರು ಮುಕ್ತರಾಗುವರೆಂದು ಶಾಸ್ತ್ರ ಹೇಳುತ್ತಿದೆ. ಹೀಗಿದ್ದರೂ ನಾನೇಕೆ ಮುಕ್ತನಾಗಿ ವೈಕುಂಠಕ್ಕೆ ಹೋಗಲಿಲ್ಲ?" - ಎಂದು ಕೇಳಿದ. ನಾರದರು - "ಅಯ್ಯಾ ನಿನಗೆ ಉತ್ತರ ಹೇಳಲು ನನಗೆ ಸಮಯವಿಲ್ಲ. ನೀನು ಈ ದಾರಿಯಲ್ಲೇ ಮುಂದಕ್ಕೆ ನಡೆದು ಹೋದರೆ ಬ್ರಹ್ಮದೇವರು ಸಿಕ್ಕುತ್ತಾರೆ, ಅವರಲ್ಲಿ ಕೇಳಿ ತಿಳಿದುಕೋ" - ಎಂದು ದಾರಿ ತೋರಿಸಿ ಹೊರಟು ಹೋದರು.

ನಾರದರು ತೋರಿಸಿದ ಮಾರ್ಗದಲ್ಲಿ ಸ್ವಲ್ಪದೂರ ಸಾಗಿದಾಗ ಭಕ್ತನಿಗೆ ಬ್ರಹ್ಮದೇವರು ಕಾಣಿಸಿದರು. ಭಕ್ತನು ಪ್ರದಕ್ಷಿಣ ನಮಸ್ಕಾರ ಮಾಡಿ, ಹಿಂದೆ ನಾರದರಲ್ಲಿ ಪ್ರಶ್ನಿಸಿದಂತೆಯೇ ಪ್ರಶ್ನಿಸಿದ. ಬ್ರಹ್ಮನು - "ನಿನ್ನ ಪ್ರಶ್ನೆಗೆ ಶಿವನು ಕಾಣಿಸುತ್ತಾನೆ. ಆತನಲ್ಲಿ ಪ್ರಶ್ನಿಸು" - ಎಂದು ತಿಳಿಸಿ ಅಂತರ್ಧಾನನಾದನು.

ಭಕ್ತನು ಅದೇ ರೀತಿಯಲ್ಲಿ ಮುಂದೆ ಸಾಗಿದಾಗ ಬ್ರಹ್ಮದೇವರು ತಿಳಿಸಿದ್ದ ಹಾಗೆ ಶಿವನ ದರ್ಶನವಾಯಿತು. ಪ್ರದಕ್ಷಿಣ ಪೂರ್ವಕವಾಗಿ ನಮಸ್ಕಾರ ಮಾಡಿ, ಭಕ್ತನು ತನ್ನ ಪ್ರಶ್ನೆಯನ್ನು ಹಿಂದಿನಂತೆಯೇ ಶಿವನ ಮುಂದೆ ಇಟ್ಟ. ಶಿವನು ಪ್ರಶ್ನೆಯನ್ನು ಆಲಿಸಿದಮೇಲೆ - "ಭಕ್ತನೇ, ಇಲ್ಲಿಯವರೆಗೆ ಹೇಗೂ ಬಂದಿದ್ದೀಯೆ. ಇನ್ನು ಸ್ವಲ್ಪವೇ ದೂರ ಮುಂದಕ್ಕೆ ಹೋಗು. ಅಲ್ಲಿ ಭಗವಂತನಾದ ವಿಷ್ಣು ಸಿಕ್ಕುತ್ತಾನೆ. ನಿನ್ನ ಪ್ರಶ್ನೆಗೆ ಆತನು ನಿಖರವಾಗಿ ಉತ್ತರ ಹೇಳುತ್ತಾನೆ" - ಎಂದ.

ಶಿವನು ಹೇಳಿದಂತೆ ಭಕ್ತನು ಮುಂದುವರಿದು ಸ್ವಲ್ಪ ದೂರ ಸಾಗಿದಾಗ ಭಗವಂತನಾದ ವಿಷ್ಣು ಕಾಣಿಸಿದನು. ಸಾಷ್ಟಾಂಗ ನಮಸ್ಕಾರ ಮಾಡಿ ಬ್ರಾಹ್ಮಣ ಭಕ್ತನು ಬಹಳ ವಿನಯದಿಂದ ಕೈಮುಗಿದು - "ಭಗವನ್, ಗಂಗಾಸ್ನಾನದಿಂದ ಮುಕ್ತಿಯಾಗುವುದೆಂದು ಶಾಸ್ತ್ರಗಳು ಹೇಳಿವೆ; ಮುಕ್ತನಾಗಿ ವೈಕುಂಠ ಸೇರುವನೆಂದು ಹೇಳಿವೆ. ಆದರೆ ನಾನು ಗಂಗಾಸ್ನಾನ ಮಾಡಿಯೂ ಸಹ ಇದ್ದಂತೆಯೇ ಇದ್ದೇನೆ. ಇದಕ್ಕೇನು ಕಾರಣ?" - ಎಂದು ಪ್ರಶ್ನಿಸಿದ. ಶ್ರೀಮನ್ನಾರಾಯಣನು ವಾತ್ಸಲ್ಯದ ಕಟಾಕ್ಷವನ್ನು ಬೀರುತ್ತ - "ಭಕ್ತಾ, ನೀನು ಈಗಾಗಲೇ ಮುಕ್ತನಾಗಿಬಿಟ್ಟಿದ್ದೀಯೆ. ಈಗ ನೀನು ನನ್ನ ಬಳಿಗೆ ವೈಕುಂಠಕ್ಕೆ ಬಂದುಬಿಟ್ಟಿದ್ದೀಯೆ. ನೀನು ಒಂದು ಸಲ ನಿನ್ನ ಶರೀರದ ಕಡೆ ನೋಡಿಕೋ. ಈಗ ನಿನ್ನದು ಮಾನವಶರೀರವಲ್ಲ, ದಿವ್ಯಶರೀರವಾಗಿಬಿಟ್ಟಿದೆ!" ಎಂದ. ಹೌದೇ? - ಎಂದು ಆಶ್ಚರ್ಯಪಡುತ್ತ ಆತನು ಒಮ್ಮೆ ತನ್ನ ಶರೀರದ ಕಡೆ ನೋಡಿಕೊಂಡ. ನಿಜವಾಗಿಯೂ ಅದು ದಿವ್ಯ ಶರೀರವಾಗಿತ್ತು. ನಾಲ್ಕು ಭುಜಗಳಿಂದ ಕೂಡಿ ಪ್ರಕಾಶಮಯವಾಗಿತ್ತು. ಭಕ್ತನು ದೇವಮೂರ್ತಿಯಾಗಿ ಬಿಟ್ಟಿದ್ದನು!

ಈ ಕಥಾ ಪ್ರಸಂಗದಲ್ಲಿ ದೃಢವಾದ ನಂಬಿಕೆಯ ಮಹಿಮೆಯನ್ನು ನಿರೂಪಿಸಲಾಗಿದೆ. ಮುಕ್ತಿ ಅಥವಾ ದೈವಸಾಕ್ಷಾತ್ಕಾರವೆಂಬುದು ಉಪಾಸಕನ ನಂಬಿಕೆಯ ಮೇಲೆ ಆಧಾರಪಟ್ಟಿದೆ. ಇದನ್ನು ಭಗವದ್ಗೀತೆ ಹೀಗೆ ಸೂಚಿಸುತ್ತದೆ --

ಅಜ್ಞಶ್ಚಾ ಶ್ರದ್ಧಧಾನಶ್ಚ
ಸಂಶಯಾತ್ಮಾವಿನಶ್ಯತಿ
ನಾಯಂ ಲೋಕೋಸ್ತಿ ನ ಪರೋ
ನ ಸುಖಂ ಸಂಶಯಾತ್ಮನಃ

ಅಜ್ಞಾನಿ, ಶ್ರದ್ಧಾವಿಹೀನ, ಸಂಶಯಗ್ರಸ್ತ - ಈ ಮೂವರೂ ಅಥವಾ ಈ ಮೂರು ದೋಷವುಳ್ಳವನು ನಾಶವಾಗುತ್ತಾನೆ. ಸಂಶಯಾತ್ಮನಿಗಂತೂ ಈ ಲೋಕವೂ ಇಲ್ಲ, ಪರಲೋಕವೂ ಇಲ್ಲ, ಸುಖವೂ ಇಲ್ಲ - ಎಂದು ಅರ್ಥ.

ಸಂಶಯರಹಿತವಾದ ಮಾನಸಿಕ ಆಲಂಬನವನ್ನೇ ನಂಬಿಕೆಯೆನ್ನಬಹುದಾಗಿದೆ. ನಂಬಿಕೆಯು ಪ್ರಾಮಾಣಿಕತೆಯಿಂದ ಕೂಡಿರಬೇಕು. ದೃಢವಾಗಿರಬೇಕಾದುದಂತೂ ಬಹಳ ಅಗತ್ಯ. ಲೋಕವ್ಯವಹಾರದಲ್ಲಿ ಒಂದು ವಸ್ತುವನ್ನೋ ವಿಷಯವನ್ನೋ ಕುರಿತ ನಂಬಿಕೆಯು ವೈಚಾರಿಕವಾದ ನಿರ್ಧಾರದ ಹಿನ್ನೆಲೆಯಲ್ಲಿ ಒಮ್ಮೆಮಾತ್ರ ಕಂಡು - ಕೇಳಿದ ಸಂಗತಿಯನ್ನು ಅವಲಂಬಿಸಿದ್ದರೆ ಅಂತಹ ನಂಬಿಕೆಯನ್ನು ಅಂಧವಿಶ್ವಾಸ ಅಥವಾ ಮೂಢನಂಬಿಕೆ ಎನ್ನಲಾಗುತ್ತದೆ. ಮತ್ತೆ ಮತ್ತೆ ಕಂಡು ಕೇಳಿ ಪ್ರತ್ಯಕ್ಷ ಪ್ರಮಾಣದ ಹಿನ್ನೆಲೆಯಲ್ಲಿ ಪ್ರವೃತ್ತವಾಗುವ ನಂಬಿಕೆಯನ್ನು ದೃಢವಿಶ್ವಾಸ ಅಥವಾ ನಂಬಿಕೆ ಎನ್ನಲಾಗುತ್ತದೆ. ದೃಢವಿಶ್ವಾಸದಿಂದ ಅಥವಾ ಅಂಧ ವಿಶ್ವಾಸದಿಂದ ಒಂದು ಸಂಕಲ್ಪವನ್ನು ಕಾರ್ಯಗತ ಮಾಡಿದಾಗ ಸತ್ಫಲವೇ ಸಿಕ್ಕಬೇಕೆಂಬ ನಿಯಮವೇನೂ ಇಲ್ಲ; ದುಷ್ಫಲವೂ ಸಿಕ್ಕಬಹುದು. ಏಕೆಂದರೆ ಸಂಕಲ್ಪವು ವಿವೇಕಯುತವಾಗಿದ್ದಾಗ ಮಾತ್ರವೇ ಕಾರ್ಯದೊಡನೆ ಸತ್ಫಲದ ಸಂಬಂಧ ಏರ್ಪಡುತ್ತದೆ. ಈ ಅಭಿಪ್ರಾಯ ಲೋಕವ್ಯವಹಾರಕ್ಕೆ ಸಂಬಂಧಿಸಿದಂತೆ ಬಹುಸಮ್ಮತವಾದ ಸಿದ್ಧಾಂತವಾಗಿರುತ್ತದೆ.

ದೈವ ಸಾಕ್ಷಾತ್ಕಾರ ಅಥವಾ ಮುಕ್ತಿಯ ವಿಷಯದಲ್ಲಿ ಫಲವನ್ನು ಕುರಿತ ಸಿದ್ಧಾಂತ ಈ ಮೊದಲು ಹೇಳಿದ್ದಕ್ಕಿಂತ ಬೇರೆಯಾಗಿರುತ್ತದೆ. ಇಲ್ಲಿ ದೃಢವಿಶ್ವಾಸ ಅಥವಾ ನಂಬಿಕೆಯೊಂದೇ ಸಾಕಾಗುತ್ತದೆ. ವೈಚಾರಿಕತೆಯ ಹಿನ್ನೆಲೆ ಇರಲೇಬೇಕೆಂಬ ನಿರ್ಬಂಧವಿಲ್ಲ; ಏಕೆಂದರೆ ವಿಚಾರ ಹೀನತೆಯಿಂದ ದೈವವನ್ನು ನಂಬಿದರೆ ಕೆಡಬೇಕಾಗುವುದಿಲ್ಲ. ಅಂಧವಿಶ್ವಾಸದಿಂದ ಆಗುವ ಹಾನಿಯೂ ಇಲ್ಲ; ಏಕೆಂದರೆ ದೈವವನ್ನು ದೃಢವಾಗಿ ನಂಬುವುದು ಅಂಧವಿಶ್ವಾಸವೆನಿಸುವುದಿಲ್ಲ. ಇಲ್ಲಿ ದುಷ್ಫಲವುಂಟಾಗುವ ಭಯವೂ ಇಲ್ಲ; ಹೀಗೆಂದರೆ ಸತ್ - ಸ್ವರೂಪನಾದ ದೈವದ ಮೇಲಿನ ನಂಬಿಕೆಯಿಂದ ಸತ್ಫಲವೇ ಹೊರತು ಬೇರೊಂದಿಲ್ಲ. ಆದುದರಿಂದ ದೈವದ ವಿಷಯದಲ್ಲಿ ನಂಬಿಕೆಯೇ ಮುಖ್ಯ; ಅದು ಸೈದ್ಧಾಂತಿಕ ವಿಶ್ವಾಸವೋ ಅಂಧವಿಶ್ವಾಸವೋ ಎಂಬುದು ಮುಖ್ಯವಲ್ಲ. ಪುರಂದರದಾಸರು - "ನಂಬಿಕೆಟ್ಟವರಿಲ್ಲವೋ ರಂಗಯ್ಯನ" ಎಂದು ಹೇಳಿದ್ದು ಇದನ್ನೇ!



# ಪ್ರಾಚೀನ ಕಾಲದ ಸಾಹಿತ್ಯದಲ್ಲಿ ಶ್ರೀವೆಂಕಟೇಶ್ವರಸ್ವಾಮಿ ಆಲಯ ...

---ಆಂಗ್ಲಮೂಲ: ಡಾ|| ಎನ್. ರಮೇಶನ್.

---ಅನುವಾದ: ಬಿ. ಎನ್. ಶ್ರೀನಿವಾಸನ್.

## ಸಾಹಿತ್ಯಾಧಾರದಲ್ಲಿನ ಪ್ರಾಚೀನಕಾಲ :

ಪ್ರಾಚೀನ ತಮಿಳು ಸಾಹಿತ್ಯದಲ್ಲಿ ತಿರುಮಲೆಯ ಪವಿತ್ರ ದೇವಾಲಯವನ್ನು ವೆಂಗಡಮ್ ಎಂಬ ಹೆಸರಿನಿಂದ ಗುರುತಿಸಲಾಗಿದೆ. ಇದು ಸಾಧಾರಣವಾಗಿ ದೆಟ್ಟಕ್ಕಿಂದೇ ಗುರುತಾದರೂ, ಬಹುಪಾಲು ಈ ದೆಟ್ಟದ ಆಸುಪಾಸಿಗೂ ಅನ್ವಯವಾಗಿದೆ. ಪ್ರಾಚೀನ ತಮಿಳು ಸಾಹಿತ್ಯದಲ್ಲಿ ವೆಂಗಡ ಅಥವಾ ವಡವೆಂಗಡವೆಂಬುದು ತಮಿಳು ಮಾತನ್ನು ಆಡುವ ಜನಪ್ರದೇಶದ ಉತ್ತರದ ಗಡಿ ಎನ್ನಲಾಗಿತ್ತು. ತಮಿಳು ಸಾಹಿತ್ಯದಲ್ಲಿ ತಮಿಳು ಮಾತನಾಡುವ ಜನ ಉತ್ತರದಲ್ಲಿ ವೆಂಗಡದಿಂದ ದಕ್ಷಿಣಕ್ಕೆ ಕುಮರಿ (ಕನ್ಯಾಕುಮಾರಿ) ವರೆಗೆ ಪೂರ್ವಪಶ್ಚಿಮಗಳಲ್ಲಿನ ಸಮುದ್ರಗಳ ನಡುವೆಯ ಭೂಭಾಗದವರೆಂದು ಗುರುತಿಸಿದೆ. ಹೀಗಾಗಿ ಬಹುಹಿಂದಿನ ಕಾಲದಲ್ಲಿಯೇ ತಮಿಳು ಮಾತನಾಡುವ ಜನ ತಮಿಳರಲ್ಲದ ಜನವನ್ನು ಸೇರಲು ವೆಂಗಡವನ್ನು ದಾಟಿ ಹೋಗಬೇಕಾಗಿದ್ದಿತು.

ವೆಂಗಡದ ಉತ್ತರಕ್ಕೆ ಇದ್ದ ಜನರು ವಡುಕು ಭಾಷಿಗರೆಂದು ತಮಿಳಿನ ಪ್ರಾಚೀನ ಸಾಹಿತ್ಯಕ್ಕೆ ತಿಳಿದಿದ್ದು, ಈ ಭೂಭಾಗದ ರಾಜರನ್ನು ವಡುಕು ರಾಜರೆಂದು (ವಡುಕರ್ ಪೆರುಮಗನ್) ಎಂದು ಗುರುತಿಸಿದ್ದರು. ಕಡೇ ಪಕ್ಷ ಒಬ್ಬನಾದರೂ ವಡುಕು ಪೆರುಮಗನ್ ಎಂದು ಕರೆಸಿಕೊಂಡದ್ದು ಕಂಡುಬರುತ್ತದೆ. ಅದರಂತೆ ಎರುಮೈ ಎಂಬ ಈತ ಈಗಣ ಉತ್ತರ ಮೈಸೂರು ಮತ್ತದರ ಹಲಭಾಗಗಳನ್ನು ಆಳಿರಬೇಕೆಂದು ಈ ಉಲ್ಲೇಖವಿರುವ ಸಂದರ್ಭ ಸೂಚಿಸುತ್ತದೆ. ವಡುಗರನಾಡಿಗೆ ಸೇರುವ ರಸ್ತೆಯನ್ನು ವಡಗೂರ್ ಮುನೈ ಎಂದು ತಮಿಳು ಸಾಹಿತ್ಯ ಸೂಚಿಸುವುದು. ಇದು ವಡುಗು ನಾಡಿನ ರಾಜಮಾರ್ಗದಲ್ಲಿನ ತಮಿಳು ಪ್ರಾಂತ್ಯದ ಹೊರ ಉಕ್ಕಡವಾಗಿರಬೇಕು.

ಪ್ರಾಚೀನ ತಮಿಳು ವ್ಯಾಕರಣ ತೊಲ್‌ಕಾಪ್ಪಿಯಂ ಪ್ರಕಾರ ವೆಂಗಡಂ ಎಂಬುದು ದೆಟ್ಟದ ಹೆಸರು. ಸಂಗಂ ಕಾಲದ ಕವಿ ಮಾಮೂಲನಾರನೂ ದೆಟ್ಟವನ್ನು ಇದೇ ಹೆಸರಿನಿಂದ ಗುರುತಿಸಿದ್ದಾನೆ. ಮಾಮೂಲನಾರನು ದೆಟ್ಟದ ಮೇಲಿನ ಉತ್ಸವ ಜಾತ್ರೆಗಳನ್ನು ಹೆಸರಿಸುತ್ತಾನೆ. ಇವರಿಂದಾಗಿ ಒಂದು ಆಲಯ ಇದ್ದಿರಬೇಕು. ಇಲ್ಲಿ ತೊಲ್‌ಕಾಪ್ಪಿಯವಾಗಲೀ ಮಾಮೂಲನಾರನಾಗಲೀ ಆಲಯದ ಹೆಸರನ್ನಾಗಲೀ, ತಿರುವೆಂಗಡ ಮುಡೈಯಾನ್ ನನ್ನಾಗಲೀ ಅಥವಾ ಈ ಹೆಸರಿನ ಯಾವುದೇ

ಪರ್ಯಾಯ ಹೆಸರನ್ನಾಗಲೀ ಅಥವಾ ಇನ್ನಾವುದೇ ದೇವರ ಯಾವ ಹೆಸರನ್ನಾಗಲೀ ತಿಳಿಸುವುದಿಲ್ಲ. ಆದರೆ ತಮಿಳಿನ ಮತ್ತೊಂದು ಕೃತಿ ಶಿಲಪ್ಪದಿಕಾರಂ ವೆಂಗಡದ ದೆಟ್ಟದ ಮೇಲಿನ ದೇವರ ವಿವರಣೆ ನೀಡುತ್ತದೆ. ಇದು ವಿಷ್ಣುವೇ ಎನ್ನಬೇಕು.

## ಸಂಗಂ ಸಾಹಿತ್ಯದಲ್ಲಿ ತಿರುಮಲೆ :

ತಮಿಳಿನ ಪ್ರಾಚೀನ ಸಾಹಿತ್ಯ ಸಂಗಂ ಸಾಹಿತ್ಯ ಹಲವಾರು ಕವನ ಸಂಗ್ರಹಗಳದ್ದಾಗಿದ್ದು, ಒಂದು ಕಾಲದಲ್ಲಿ ತಮಿಳು ನಾಡಿನಲ್ಲಿ ಅತ್ಯಂತ ಪ್ರಸಿದ್ಧವಾಗಿದ್ದಿತು. ಸಂಗಂ ಸಾಹಿತ್ಯವನ್ನು ಮೂರು ಭಾಗಗಳನ್ನಾಗಿಸಿದ್ದು, ಪ್ರತಿಯೊಂದೂ ಒಬ್ಬ ಹಿರಿಕವಿಯನ್ನು ಆಶ್ರಯಿಸಿತ್ತು. ಈ ಕವನಗಳ ಪ್ರಕೃತಿಯನ್ನು ಗಮನಿಸಿದರೆ ಅವುಗಳ ಕರ್ತೃಗಳ ಪ್ರತಿಭಾ ಶೈಲಿಗಳು ಪ್ರಕಟವಾಗುವಂತಿವೆ. ಹೀಗಾಗಿ ಇಡೀ ಸಂಗಂ ಸಾಹಿತ್ಯ ಕಾವ್ಯಸಂಗ್ರಹಗಳಾಗಿದ್ದು ವಿವಿಧ ರೀತಿಯ ತಾಲ, ಛಂದಸ್ಸುಗಳಲ್ಲಿ ಪ್ರಕಟಗೊಂಡಿವೆ ಎನ್ನಬಹುದು.



ತಮಿಳಿನಲ್ಲಿ ಭಾರತ ಕಾವ್ಯವನ್ನು ರಚಿಸಿದ ಪ್ರಾಚೀನ ಕವಿಯೆಂದು ಪೆರುಂದೇವನಾರ್ ಹೆಸರು ಕೇಳಿಬರುತ್ತದೆ. ಈತ ತಮಿಳು ಸಾಹಿತ್ಯದಲ್ಲಿ ಸಾಮಾನ್ಯವಾಗಿ ಕಂಡುಬರುವ ಇತರ ಪೆರುಂದೇವನಾರುಗಳಿಗಿಂತ ಬೇರೆಯಾದವನು. ಈತ ಬಹು ಪ್ರಾಚೀನ ಕವಿಯಾಗಿದ್ದು ಎಟ್ಟು ತೊಗೈ ಸಂಗ್ರಹವನ್ನು ರಚಿಸಿದ್ದೇ ಅಲ್ಲದೆ ಅಂದಿಗೆ ಈ ಭೂಭಾಗದಲ್ಲಿ ಪೂಜೆಗೊಳ್ಳುತ್ತಿದ್ದ ಎಲ್ಲ ದೇವರುಗಳ ಪ್ರಾರ್ಥನಾ ಪದ್ಯಗಳನ್ನೂ ರಚಿಸಿದ. ಇದರ ಕಾಲವನ್ನು ಖಚಿತವಾಗಿ ನಿರ್ಧರಿಸಲಾಗಿಲ್ಲವಾದರೂ ಕ್ರಿಸ್ತ ಶಕದ ಆರಂಭದಲ್ಲಿರಬೇಕೆಂದು ಬಹುತೇಕ ಒಪ್ಪಲಾಗಿದೆ. ೧ನೇ ಶತಮಾನದ ಪಾಂಡ್ಯರಾಜ ತಲೈಯಲಂಗನಮ್ ವಿಜೇತನೂ ಮೊದಲಿನವಿರಬಹುದೆಂದು ಊಹಿಸಬಹುದಷ್ಟೆ.

ಈ ಕಾಲದ ಸಂಗಂ ಸಾಹಿತ್ಯದ ಹಲವಾರು ಕಾವನ ಸಂಗ್ರಹಗಳಲ್ಲಿ ತಿರುಪತಿಯನ್ನು ವೆಂಗಡವೆಂದು ಹೆಸರಿಟ್ಟು ಕರೆಯಲಾಗಿದೆ. ತೊಲ್ಕಾಪ್ಪಿಯದಂತೆಯೇ ಇಲ್ಲಿಯೂ ತಿರುಪತಿಯನ್ನು ತಮಿಳು ಮಾತನಾಡುವ ಜನರ ಪ್ರಾಂತ್ಯದ ಉತ್ತರದ ಗಡಿಯೆಂದು ಗುರುತಿಸಲಾಗಿದೆ.

ಹಿಂದೆಯೇ ಉಲ್ಲೇಖಗೊಂಡಿರುವ ತಲೈಯಲಂಗನಮ್ ವಿಜೇತ ರಾಜ ಪಾಂಡ್ಯನೊಡನೆ ತಿರುಪತಿಯನ್ನು ಹೆಸರಿಸುವ ಇನ್ನಿಬ್ಬರು ಕವಿಗಳನ್ನು ಗುರುತಿಸಬಹುದು. ಕಲ್ಲಾಡನಾರ್ ಹಾಗೂ ನಕ್ಕೀರಾರ್. ವೆಂಗಡದ ಸುತ್ತಣ ಪ್ರಾಂತ್ಯದ ದೊರೆ ಪುಳ್ಳಿಯನ್ನು ಪ್ರಸಿದ್ಧ ಅಹನಾನೂರು ಕವಿತೆಯ ೮೩ ನೆಯ ಪದ್ಯ ಹೆಸರಿಸುತ್ತದೆ. ಈ ಪದ್ಯದಲ್ಲಿ ಅವನನ್ನು ಇಳೈಯಾರ್ ಪೆರುಮಗನ್ ಎನ್ನಲಾಗಿದೆ. ಈ ಸಂದರ್ಭದಲ್ಲಿ ಬಳಸಲಾದ ತಮಿಳು ಪದ - ಕಳ್ಳ - ಎಂದರೆ ದೇಸಾಯಗೊಳ್ಳದ ಭೂಮಿಯಾಗಿರಬೇಕು.

ತಾತ್ಪರ್ಯವೆಂದರೆ ಈ ಉಲ್ಲೇಖವು ಪ್ರಾಯಶಃ ವ್ಯಾಪಕವಾದ ದೇಸಾಯ ನಡೆಯದಿದ್ದ ಸ್ಥಿತಿಯನ್ನು ಸೂಚಿಸುತ್ತದೆ. ಇದೇ ಕವಿಯು ರಚನೆಯ ಅಹನಾನೂರಿನ ೨೦೯ ನೇ ಪದ್ಯದಲ್ಲಿ ಪುಳ್ಳಿಯನ್ನೂ ಅವನ ವೆಂಗಡವನ್ನೂ ಮತ್ತೆ ಹೆಸರಿಸಿ, ಪುಳ್ಳಿಯ ನಾಡಿನಿಂದ ಉತ್ತರಕ್ಕೆ ಹೋಗಬೇಕಾದರೆ ಈ ಬೆಟ್ಟದಲ್ಲಿಯ ಇಕ್ಕಟ್ಟಾದ ದಾರಿಯ - ಸುರಂಗದ ಮೂಲಕ ಹೋಗಬೇಕು ಎಂದು ಹೇಳುತ್ತಾನೆ.

ನಕ್ಕೀರಾರ್ ತಮಿಳಿನ ಪ್ರಾಚೀನ ಪ್ರಸಿದ್ಧ ಕವಿಯಾಗಿ ಅವನ ಬಗ್ಗೆ ಅನೇಕ ಕಥೆಗಳೂ ಹರಡಿವೆ. ಅವನು ವೆಂಗಡವೆಂದು ಹೇಳದಿದ್ದರೂ ವೆಂಗಡದ ಸುತ್ತಮುತ್ತಲಲ್ಲಿ ವೆಂಗಡದ ಪ್ರಭಾವವನ್ನು ಗುರುತಿಸಿದ್ದಾನೆ. ಈಗಣ ಗೂಡೂರು ತಾಲ್ಲೂಕಿನ ರೆಡ್ಡಿಪಾಳಯಂ ಒಮ್ಮೆ ಪವತ್ತಿರಿಯಾಗಿ ತರೈಯನ್‌ನ ರಾಜಧಾನಿಯಾಗಿದ್ದಿತು. ೨೫೩ ನೇ ಪದ್ಯದಲ್ಲಿ ನಕ್ಕೀರಾರ್ ಮತ್ತೆ ವಡುಕೂರ್ ಪೆರುಮಗನಾದ ಎರುಮೈಯ ಬಗ್ಗೆ ಹೇಳುತ್ತಾನೆ. ಈ ಎರುಮೈಯನ್ನು ವಡುಕೂರು ದೊರೆಯೆಂದು ಇತರ ಅನೇಕ ಕವಿಗಳು ಬೇರೆ ಬೇರೆ ಪದ್ಯಗಳಲ್ಲಿ ಗುರುತಿಸಿದ್ದಾರೆ. ನಕ್ಕೀರಾರನು ತನ್ನ ಪದ್ಯದಲ್ಲಿ ವಡುಕೂರು ರಾಜನ ಪ್ರಾಂತ್ಯ ಆಯಿರಿ ನದಿಯ ಪ್ರಾಂತ್ಯದಲ್ಲಿದೆಯೆಂದೂ, ಈ ನದಿಯನ್ನು ದಾಟುವುದರಿಂದ ತಮಿಳು ಪ್ರಾಂತ್ಯದಿಂದ ವಡುಕರ ನಾಡನ್ನು ಸೇರಬಹುದೆಂದೂ ಹೇಳುತ್ತಾರೆ. ಅಯಿರಿಯು ಈ ಗಣ ಕರ್ನಾಟಕದ ಹಗರಿ ನದಿಯಾಗಿದ್ದಿರಬೇಕು. (ಆಂಧ್ರದ ಆದೋನಿಯ ಬಳಿಯದು) ಇದು ನಂತರದ ಕಾಲದಲ್ಲಿ ತಮಿಳರ ಹಾಗೂ ಉತ್ತರದ ಇತರರ ನಡುವಿನ ಗಡಿಯಾಗಿದ್ದಿತು.

ಇನ್ನೊಬ್ಬ ಪ್ರಾಚೀನ ತಮಿಳುಕವಿ ಕನಕ್ಕಯನಾರ್‌ನು (ಪ್ರಾಯಶಃ ನಕ್ಕೀರಾರನ ತಂದೆ; ಕಾರಣ ನಕ್ಕೀರಾರನನ್ನು ಹಲವು ಬಾರಿ ಕನಕ್ಕಯನಾರನ ಮಗ ಎಂದು ಗುರುತಿಸಲಾಗಿದೆ.) ಅಹಂ ನ ೨೭ನೇ ಪದ್ಯದಲ್ಲಿ ವಡವೆಂಗಡವನ್ನು ಹೆಸರಿಸಿ, ಇಲ್ಲಿನ ಅರಣ್ಯಗಳು ಆನೆಗಳಿಂದ ತುಂಬಿರುವುದನ್ನೂ, ಪಾಂಡ್ಯನೊಬ್ಬನ ಪ್ರಸಿದ್ಧ ಮುತ್ತಿನ ಬಂದರು ಸ್ಥಳವಾದ ಕೋರ್ಕೈಯನ್ನು ವಿವರಿಸುವಲ್ಲಿ ತಿಳಿಸುತ್ತಾನೆ. ವೆಂಗಡವನ್ನು ಹೆಸರಿಸುವ ಇತರ ಕವಿಗಳೆಂದರೆ ತಾಯಂಕಣ್ಣನ್ ಹಾಗೂ ಕಾಟ್ಟೂರ್ ಕಿಲಾರ್‌ನ ಮಗ ಕಣ್ಣನ್, ತಾಯಂಕಣ್ಣನ್ - ತಾಯಂಗಣ್ಣನ್ ವೆಂಗಡವನ್ನು ತೊಂಡೈಯರ್‌ಗೆ ಸೇರಿದ್ದೆಂದೂ, ಇದರಾಚೆಯ ವಡುಕುನಾಡನ್ನು ವಿವರಿಸಿದ್ದಾನೆ. ಕಟ್ಟೂರ್ ಕಿಲಾರ್‌ನ ಮಗ ಕಣ್ಣನು ವೆಂಗಡವು ಕರೈಯನ್‌ಗೆ ಸೇರಿದ್ದೆಂದೂ ಇಲ್ಲಿನ ಆನೆಗಳು ಬಿದಿರು ಹುಲ್ಲನ್ನೂ ಎಳೇ ಗರಿಕೆಯನ್ನೂ ತಿನ್ನುತ್ತಿದ್ದವು ಎಂದು ವಿವರಿಸಿದ್ದಾನೆ.

ಈ ಪ್ರಾಚೀನ ತಮಿಳು ಕವಿಗಳಲ್ಲಿ ಕಡೆಯವನು ಹಾಗೂ ಅತಿಪ್ರಸಿದ್ಧ, ಅತಿ ಪ್ರಾಚೀನನಾದವನು ಮಾಮೂಲನಾರ್. ಇವನ ಕಾವ್ಯ ಸಂಗ್ರಹದಲ್ಲಿ ಏಳು ಪದ್ಯಗಳು ವೆಂಗಡವನ್ನು ಪ್ರತ್ಯಕ್ಷ ಅಥವಾ ಪರೋಕ್ಷವಾಗಿ ಉಲ್ಲೇಖಿಸಿವೆ. ೬೧ ನೇ ಪದ್ಯದಲ್ಲಿ ವೆಂಗಡವು ಕಾಲವರ್ ದೊರೆಯಾದ ಪುಳ್ಳಿಗೆ ಸೇರಿದ್ದು ಎನ್ನುತ್ತ ವೆಂಗಡವು ತನ್ನ ಜಾತ್ರೆಗಳಿಗೆ ಉತ್ಸವಗಳಿಗೆ ಪ್ರಸಿದ್ಧವಾಗಿದೆ ಎನ್ನುತ್ತಾನೆ. ಈ ಜಾತ್ರೆ ಉತ್ಸವಗಳ ಉಲ್ಲೇಖ ಪ್ರಮುಖವಾಗಲು ಕಾರಣ ಇಲ್ಲೊಂದು ಆಲಯ ಇರಬೇಕೆಂದು ನಾವು ನಿರ್ಧಾರಕ್ಕೆ ಬರಲು ಅನುಕೂಲ ಮಾಡಿಕೊಡುವ ಸಾಕ್ಷ್ಯ ಪ್ರಾಚೀನ ತಮಿಳಿನಲ್ಲಿ ಇದೊಂದೇ ಆಗಿರುವುದು.

ಈ ಭಾಗ ಅಹನಾನೂರಿನ ೬೧ ನೇ ಪದ್ಯದಲ್ಲಿ ಬರುತ್ತವೆ. ಈ ಭಾಗವನ್ನು ಸ್ವಚ್ಛಂದವಾಗಿ ಅನುವಾದಿಸಿದಾಗ ಉಂಟಾಗುವ ನಿಷ್ಪತ್ತಿ ಹೀಗೆ - ಯುದ್ಧಕಲೆಗೆ ಹೆಸರಾದ ಕಾಲ್ಬಳೆ ತೊಡುವ, ಭತ್ತದಿಂದ ಮಾಡಿದ ಕಳ್ಳಿಗೆ ಬದಲಾಗಿ ಆನೆಯ ದಂತಗಳನ್ನು ಕೊಡುವ ಕಾಲವರ ದೊರೆ ಪುಳ್ಳಿಯು ಮಾಲವರ ಪ್ರದೇಶವನ್ನು ಆಕ್ರಮಿಸಿ ಪ್ರಸಿದ್ಧನಾಗಿದ್ದು, ತನ್ನನ್ನು ಸೇರಿದವರಿಗೆ ಬಹು ಮೂಲ್ಯದ ಉಡುಗೊರೆಗಳನ್ನು ನೀಡುತ್ತಾನೆ. ಪುಳ್ಳಿಯ ರಾಜಧಾನಿ ವೆಂಗಡವು ತನ್ನಲ್ಲಿ ನಡೆಯುವ ಉತ್ಸವ ಜಾತ್ರೆಗಳಿಂದಾಗಿ ಶ್ರೀಮಂತವಾಗಿದ್ದು, ಅಲ್ಲಿ ಸೇರಿದ ಮೇಲೆ ತಿರುಗಿ ಬರುವುದು ಕಷ್ಟವಾಗಬಹುದು. ಕಥಾಭಾಗದ ತಾತ್ಪರ್ಯವೆಂದರೆ "ಐಶ್ವರ್ಯದ ಅನ್ವೇಷಣೆಯಲ್ಲಿ ಪ್ರೇಯಸಿಯನ್ನು ತೊರೆದ ಪ್ರಿಯಕರ ದೂರತೀರವನ್ನು ಸೇರಿ ನಿರೀಕ್ಷಣೆಗಿಂತ ಹೆಚ್ಚು ಕಾಲ ಹಿಂದಿರುಗದಿದ್ದಾನೆ. ಅವನು ಹಿಂದಿರುಗುವುದು ನಿಧಾನವಾಗಬಹುದಾದರೂ ಬಂದೇತೀರುತ್ತಾನೆ ಎಂದು ಪ್ರೇಯಸಿಗೆ ಸಮಾಧಾನ ಮಾಡಲಾಗುತ್ತಿದೆ. ಈ ಮಾತಿಗೆ ಒತ್ತುಕೊಡಲು, ತನ್ನ ಸಂಪದನ್ವೇಷಣೆಯಲ್ಲಿ ಆತ ಐಶ್ವರ್ಯಭರಿತವಾದ ವೆಂಗಡವನ್ನು ಪಡೆದರೂ, ಅಲ್ಲಿಯೇ ನಿಲ್ಲದೆ ಅವಳ ಬಳಿಗೆ ಹಿಂದಿರುಗುತ್ತಾನೆ ಎನ್ನಲಾಗಿದೆ. ಇಲ್ಲಿ ಗಮನಿಸತಕ್ಕ ಅಂಶವೆಂದರೆ ವೆಂಗಡದ ಪ್ರಸಿದ್ಧಿಗೆ ಅಲ್ಲಿ ಆಗಿಂದಾಗ್ಗೆ ನಡೆಯುತ್ತಿದ್ದ ಜಾತ್ರೆ ಉತ್ಸವಗಳು - ಈಗ ಈ ದೇವಾಲಯನಗರದ ಪ್ರತ್ಯೇಕ ವೈಶಿಷ್ಟ್ಯವಾದವುಗಳು - ಕೆಲಮಟ್ಟಿಗಾದರೂ ಕಾರಣವಾಗಿದ್ದವು ಎಂಬ ಮಾಮೂಲನಾರನ ಅಭಿಪ್ರಾಯ.

ಇದೇ ಕವಿಯ ೧೧೫ ಹಾಗೂ ೨೮೧ ನೇ ಪದ್ಯಗಳು ಕೂಡನಾಡುವಿನ ಎರುಮೈ ಹಾಗೂ ವಡುಕರನ್ನು ಕುರಿತದ್ದು. ಇಲ್ಲಿನ ಒಂದು ಹೇಳಿಕೆಯಲ್ಲಿ ಕವಿ ಹೇಳುವಂತೆ ಮೌರ್ಯರು ತಮ್ಮ ದಕ್ಷಿಣದ ಧಾಳಿಯಲ್ಲಿ ಹಿಂದೆಯೇ ಹೇಳಿದಂತೆ ಇಲ್ಲಿನ ಒಂದು ಸುರಂಗದ ಮೂಲಕ ವಡುಕರನ್ನು ಮುಂದೆ ಒತ್ತಿಕೊಂಡು ಬಂದರು. ೨೯೫ನೇ ಪದ್ಯದಲ್ಲಿ ತಿರುಪತಿಯನ್ನು ಆತ ಪುಳ್ಳಿಕುನ್ರಂ - ಪುಳ್ಳಿದೊರೆಯ ಬೆಟ್ಟವೆಂದು ಹೇಳುತ್ತ ಈ ಪ್ರಾಂತ್ಯ ವಡುಕರದೆಂದೂ ಇಲ್ಲಿನ ಆಡುಭಾಷೆ ಬೇರೆಯೆಂದೂ ಹೇಳುತ್ತಾನೆ. ೩೧೧ ನೇ ಪದ್ಯದಲ್ಲಿ ಇಲ್ಲಿನ ಜನಜೀವನವನ್ನು ವಿವರಿಸುತ್ತ ಇವರು ಅನ್ನವನ್ನು ಹುಳಿಯೊಂದಿಗೆ ಮುತ್ತುಗದೆಲೆಯಲ್ಲಿ ಊಟ ಮಾಡುವರೆಂದು ಹೇಳುತ್ತಾನೆ

೩೫೯ ನೇ ಪದ್ಯದಲ್ಲಿ ಪುಳ್ಳಿದೊರೆ ಉದಾರವಾಗಿ ಉಡುಗೊರೆಗಳನ್ನು ನೀಡುವವನು ಎನ್ನಲಾಗಿದೆ

೩೯೩ನೇ ಪದ್ಯದಲ್ಲಿ ಇಲ್ಲಿನ ಹಲವು ಭಾಷೆಗಳ ಲಕ್ಷಣದಂತೆ ಪುಳ್ಳಿದೊರೆ ಉದ್ಧಟ ಮಾತಿನವನೆಂದು ವರ್ಣಿಸಲಾಗಿದೆ. ಇತರ ಹಲವು ಕವಿಗಳು ಹಲವಾರು ಬಾರಿ ಇಲ್ಲಿನ ಯಾವುದಾದರೊಂದು ಅಂಶವನ್ನು ಎತ್ತಿ ಹೇಳಿದರೂ ವೆಂಗಡಂ ಎಂಬುದು ಪ್ರತ್ಯೇಕವಾಗಿ ಹೇಳಲ್ಪಟ್ಟಿಲ್ಲ.

ಈ ಪ್ರಾಚೀನ ಸಾಹಿತ್ಯಕ ದಾಖಲೆಗಳಲ್ಲಿ ಹಲವಾರು ಪ್ರಸಿದ್ಧ ಕವಿಗಳು ಅಂದಿನ ಕಾಲದ ಬೆಟ್ಟ ಹಾಗೂ ಬದಿಯ ಹಲವು ಪ್ರಾಂತ್ಯಗಳ ವಿಶಿಷ್ಟ ಲಕ್ಷಣಗಳಿಂದು ಕರೆಯಬಹುದಾದ ವೆಂಗಡವನ್ನು ವಿವರಿಸಿದ್ದರೂ, ಇಂದು ಇಡೀ ಪ್ರಾಂತ್ಯದಲ್ಲಿ ಪ್ರಮುಖವಾಗಿರುವ ಹಿರಿಯ ದೇವಾಲಯದ ಬಗ್ಗೆ ಪ್ರತ್ಯೇಕವಾಗಿ ಹೇಳಿಲ್ಲ ಎಂಬುದು ಆಸಕ್ತಿದಾಯಕ ಅಂಶ. ಮಾಮೂಲನಾರನ ಪದ್ಯ ೬೧ ರಲ್ಲಿ ಇಲ್ಲಿ ನಡೆಯುತ್ತಿದ್ದ ಉತ್ಸವಗಳ ಬಗ್ಗೆ ಬಂದಿರುವುದನ್ನು ಹೇಳಿಯಾಗಿದೆ. ಇದರಿಂದಾಗಿ ಇಲ್ಲೊಂದು ಆಲಯವೂ, ಅದಕ್ಕೆ ಸಂಬಂಧಿಸಿದ ಉತ್ಸವಗಳೂ ಖಚಿತವಾಗಿ, ಸಂಗಂ ಸಾಹಿತ್ಯಕಾಲದಲ್ಲಿ, ಆಲಯಕ್ಕಿಂತ ಪರ್ವತಕ್ಕೇ ಪ್ರಾಧಾನ್ಯವಿದ್ದು, ಅಂದಿಗೆ ಇಲ್ಲಿನ ಆಲಯ ಪ್ರಾಮುಖ್ಯತೆಯನ್ನು ಪಡೆದಿರಲಿಲ್ಲ ಎನ್ನಬರುತ್ತವೆ.

ಏನೇ ಆದರೂ ಸಂಗಂ ಸಾಹಿತ್ಯದಲ್ಲಿನ ಈ ಪ್ರಾಂತ್ಯದ ಉಲ್ಲೇಖಗಳು ಮೂರು ಅಂಶಗಳನ್ನು ಖಚಿತಗೊಳಿಸುತ್ತವೆ. ಮೊದಲನೆಯದು ತಿರುಪತಿಯು ವೆಂಗಡವೆಂದು ಹೆಸರಾಗಿ ತಮಿಳು ತೆಲುಗು ಮಾತನಾಡುವ ಜನರ ಗಡಿ ಪ್ರದೇಶವಾಗಿದ್ದಿತು. ಎರಡನೆಯದು ಬೆಟ್ಟದ ಉತ್ತರಕ್ಕೆ ಇದ್ದದ್ದು ತಮಿಳಾಗಿರಲಿಲ್ಲ. ಮೂರನೆಯ ಅಂಶವೆಂದರೆ - ಈ ಪ್ರಾಂತ್ಯವೆಲ್ಲ ಆನೆಗಳು ಅಲೆಯುತ್ತಿದ್ದ ಘನಕಾನನವಾಗಿದ್ದಿತು. ಇಲ್ಲಿನ ಪುಳ್ಳಿದೊರೆ ಕಳ್ವರ್ ಜನವನ್ನು ಆಳುತ್ತಿದ್ದು, ನಂತರ ತರೈಯನ್ ವೆಂಗಡವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳಿದ. ನಂತರ ಪ್ರಾಯಶಃ ಇನ್ನೂ ಸ್ವಲ್ಪ ಉತ್ತರದ ಪವತ್ರಿಂ ರಾಜಧಾನಿಯಾಗಿರಬೇಕು.

## ಆಳ್ವಾರರ ಕಾಲ

ಭಗವಾನ್ ವಿಷ್ಣುವು ಆರಾದಿಸಲ್ಪಡುತ್ತಿರುವ ೧೦೮ ಸ್ಥಳಗಳ ಮಹಿಮೆಯನ್ನು ವಿವರಿಸುವ ನಾಲ್ಕು ಸಾವಿರ ಪದ್ಯಗಳ ಪಾಶುರಗಳ ಸಂಗ್ರಹವೇ ಪ್ರಾಚೀನ ತಮಿಳಿನ 'ನಾಲಾಯಿರಪ್ರಬಂಧಗಳು' ಪಾರಂಪರಿಕವಾಗಿ ಹನ್ನೆರಡುಮಂದಿಯೆಂದು ಗುರುತಿಸಲಾಗಿರುವ ದೈವಭಕ್ತರಾದ ಆಳ್ವಾರರು ಇದನ್ನು ರಚಿಸಿದರು. ತಿರುಮಲೆಯ ಪ್ರಾಚೀನ ಇತಿಹಾಸದ ಮೇಲೆ ಈ ಪ್ರಬಂಧಗಳು ಸಾಕಷ್ಟು ಬೆಳಕು ಚೆಲ್ಲುತ್ತವೆ. ಇಡೀ ನಾಲಾಯಿರ ಪ್ರಬಂಧ ಕ್ರಿ. ಶ. ೬ನೇ ಶತಮಾನದಿಂದ ೯ನೇ ಶತಮಾನದ ವರೆಗಿನ ಸ್ಥೂಲವಾಗಿ ಐದು ಶತಮಾನಗಳನ್ನು ಪ್ರತಿನಿಧಿಸುತ್ತವೆ ಎನ್ನಬಹುದು. ಇಲ್ಲಿ ಹನ್ನೆರಡು ಮಂದಿ ಆಳ್ವಾರರಲ್ಲಿ ಮೂವರನ್ನು ಮೊದಲಾಳ್ವಾರರೆಂದು ಸಂದಮಿಳಿನಲ್ಲಿ ಹಾಡಿದವರೆಂದೂ ತಿರುಮಂಗೈ ಆಳ್ವಾರರು ಹೇಳುತ್ತಾರೆ. ಇವರುಗಳೆಂದರೆ ಪೊಯ್ಗೈ ಆಳ್ವಾರ್ ಭೂದತ್ತಾಳ್ವಾರ್ ಹಾಗೂ ಪೇಯಾಳ್ವಾರ್. ಇವರ ನಂತರ ಬಂದ ತಿರುಮಳಿಶೈ ಆಳ್ವಾರರನ್ನೂ ಇವರೊಡನೆಯೇ ಆದ್ಯರಲ್ಲಿ ಸೇರಿಸುವುದುಂಟು.

ಇವರುಗಳ ಸಾಹಿತ್ಯದ ಆಂತರಿಕ ಸಾಕ್ಷ್ಯಗಳೊಡನೆ, ಅವರ ಕಾಲದ ಚಟುವಟಿಕೆಗಳ ಪರಿಚಯವಾಗಿ ತಿರುಮಲೆಯ ಆಲಯದ ಇತಿಹಾಸದ ಬಗ್ಗೆ ಹೆಚ್ಚಿನ ಬೆಳಕು ಮೂಡುವುದೇ ಅಲ್ಲದೆ, ಭಕ್ತಿ ಪಂಥದ ಉದಯ, ಸಾಮಾನ್ಯವಾಗಿ ಪಾಂಚರಾತ್ರವೆಂದು ಕರೆಯಲಾದ ವೈಷ್ಣವ ಪಂಥದ ವಿಕಾಸಗಳ ಬಗ್ಗೆ ತಿಳಿದುಬರುತ್ತದೆ. ಪಾಂಚರಾತ್ರ ಸಾಹಿತ್ಯ ಭಕ್ತ ಜೀವನದ ನಿಯಮ ನಡಾವಳಿಗಳನ್ನೂ, ಮೋಕ್ಷ ಮಾರ್ಗದ ಸಾಧನೆಯನ್ನೂ ಕುರಿತು ವಿವರಿಸುತ್ತದೆ.



ಆಳ್ವಾರರಲ್ಲಿ ಪ್ರಥಮರು ಪೊಯ್ಗೈ ಆಳ್ವಾರ್. ನಾಲಾಯಿರ ದಿವ್ಯಪ್ರಬಂಧದ ಕಡೆಯ ಸಹಸ್ರದ ಮೊದಲ ಶತಕದ ಕರ್ತೃ, ಹಿರಿಯ ವೈಷ್ಣವ ಭಕ್ತರೇ ಅಲ್ಲದೆ ತಮಿಳು ಸಾಹಿತ್ಯದ ಪ್ರಮುಖರಲ್ಲಿ ಒಬ್ಬರೆಂದು ಗಣಿತರಾಗಿದ್ದಾರೆ. ಇವರ ಮೊದಲಾಂತಿರುವಂದಾದಿಯಲ್ಲಿ (ಮೊದಲ ಶತಕ ಪಾಶುರಗಳು) ಹನ್ನೆರಡರಿಂದ ಹದಿನೈದು ಬಾರಿ ತಿರುಮಲೆಯ ಬಗ್ಗೆ ನೇರವಾದ ಉಲ್ಲೇಖಗಳಿವೆ. ಭಗವನ್ನಾರಾಯಣನು ಪರಮ ಕರುಣೆಯಿಂದ ಪ್ರತ್ಯಕ್ಷವಾದ ಪವಿತ್ರ ಸ್ಥಳ ಇದು ಎಂದು ಅವರು ತಿಳಿಸುತ್ತಾರೆ. ೫ ಹಾಗೂ ೭೪ ನೆಯ ಪಾಶುರಗಳು ಇಲ್ಲಿನ ದೇವರ ಲಕ್ಷಣಗಳನ್ನೂ, ಅವನು ಹಿಡಿದಿರುವ ಆಯುಧಗಳನ್ನೂ ವಿವರಿಸುತ್ತವೆ. ೨೬ನೇ ಪಾಶುರ ತಿರುಮಲೆಯು ದೇವತೆಗಳೂ ಇರಲು ಬಯಸತಕ್ಕ ಪವಿತ್ರಕ್ಷೇತ್ರವೆನ್ನುತ್ತದೆ. ೩೭ನೇ ಪಾಶುರ ಇನ್ನೂ ಮುಂದುವರಿದು ವೆಂಗಡವನ್ನು ಬಹುಸುಂದರವಾದ ಶಂಖವನ್ನು ಧ್ವನಿಗೊಳಿಸುವ ದೇವನು ನೆಲೆಸಲು ಆಯ್ಕೆ ಮಾಡಿಕೊಂಡ ಸ್ಥಳವೆಂದೂ, ಭಕ್ತಜನರೂ ಹಿರಿಯ ಜ್ಞಾನಿಗಳೂ ಬೇರೆ ಬೇರೆ ಸ್ಥಳಗಳಿಂದ ಇಲ್ಲಿಗೆ ಬಂದು, ದಿನವೂ ಈ ದೇವರನ್ನು ಕರ್ಪೂರ ಆರತಿ ನೀಡಿ ಗಂಧದಿಂದ ಅರ್ಚಿಸುವರು ಎಂದು ವಿವರಿಸಲಾಗಿದೆ. ಇಂತಹದೇ ವಿವರಣೆ ೩೯ನೇ ಪಾಶುರದಲ್ಲೂ ಇದೆ. ೪೦ನೇ ಪಾಶುರದಲ್ಲಿ ಇಲ್ಲಿನ ಪಂಥಾತೀತತೆಯನ್ನು ಆಕಾಶದಿಂದ ಬೀಳುವ ಉಲ್ಕೆಗಳನ್ನು ಕುರುವರು ತಮಗಾಗಿ ಹಿಡಿದು ಅಟ್ಟಿಸಿಕೊಂಡು ಬರುತ್ತಿರುವ ದೊಂದಿಗಳಿಂದು ಭ್ರಮಿಸುವ ಆನೆಗಳನ್ನು ವರ್ಣಿಸುತ್ತ ಹೇಳಲಾಗಿದೆ. ೭೮ ನೇ ಪಾಶುರದಲ್ಲಿ ಮತ್ತೊಂದು ಉಲ್ಲೇಖವಿದೆ. ೭೬ ನೇ ಪಾಶುರ ಇಲ್ಲಿನ ದೇವರನ್ನು ಭೂಮಿಯನ್ನಳೆದವ - ತ್ರಿವಿಕ್ರಮನೆಂದು ವರ್ಣಿಸಲಾಗಿದೆ. ೭೭ ನೇ ಪಾಶುರವು ವೇ.ಕಾ. ವಿಣ್ಣಗರ್, ಹಾಗೂ ಕೋವಲೂರುಗಳಲ್ಲಿಯಂತೆಯೇ ವೆಂಗಡವೂ ಭಗವಂತ ನೆಲೆನಿಂತ ತಾಣವೆಂದು ವರ್ಣಿಸಲಾಗಿದೆ. ಕಡೆಯ ಉಲ್ಲೇಖ ೯೯ ನೇ ಪಾಶುರದಲ್ಲಿದ್ದು, ಭಗವನ್ನಾರಾಯಣನು ಶಾಶ್ವತನಾಗಿದ್ದು ಪ್ರತಿಯೊಬ್ಬರ ಹೃದಯದಲ್ಲೂ ಇದ್ದು ಅವರನ್ನು ಉದ್ಧರಿಸುವುದೇ ಅಲ್ಲದೆ ಕ್ಷೀರ ಸಾಗರದಲ್ಲೂ, ವೆಂಗಡದಲ್ಲಿಯೂ ಇರುವವನಾಗಿದ್ದಾನೆ ಎಂಬುದಾಗಿದೆ.

ಭೂದತ್ತಾಳ್ವಾರ್‌ರು ಎಂಟು ಪಾಶುರಗಳಲ್ಲಿ ತಿರುಮಲೆಯ ಬಗ್ಗೆ ನೇರವಾಗಿ ಹೇಳಿದ್ದಾರೆ. ಮೊದಲನೆಯ ಬಾರಿಗೆ ೨೫ ನೇ ಪಾಶುರದಲ್ಲಿ ತಿರುಮಲೆಯ ಬೆಟ್ಟದಲ್ಲಿ ನಿಂತಿರುವ ಭಗವಂತನೆಂಬ ಉಲ್ಲೇಖವಿದೆ. ೩೩, ೪೫, ೪೬ ನೇ ಪಾಶುರಗಳಲ್ಲಿ ತಿರುಮಲೆ ಹಾಗೂ ವಿಷ್ಣುವನ್ನು ಕುರಿತಾಗಿವೆ: ೭೦ ನೇ ಪಾಶುರದಲ್ಲಿ ಹಲವಾರು ವೈಷ್ಣವ ದೇವಾಲಯಗಳ ಉಲ್ಲೇಖಗಳಿವೆ. ೭೨, ೭೫ ರಲ್ಲಿಯೂ ಇಂತಹವೇ ವಿವರಗಳಿವೆ. ೨೮ ನೇ ಪಾಶುರವು ವೆಂಗಡದ ದೇವರೂ, ಶ್ರೀರಂಗದ ದೇವರೂ ಒಬ್ಬರೇ ಎಂದು ಹೇಳುತ್ತದೆ.



ತಿರುಮಲೆ - ತಿರುಪತಿ ದೇವಸ್ಥಾನಗಳು

# ಅಭಿಷೇಕ ಸೇವೆಗಳು

ತಿರುಮಲೆ ತಿರುಪತಿ ದೇವಸ್ಥಾನಗಳ ಆಡಳಿತ ಪರಿಧಿಯ ಆರು ದೇವಾಲಯಗಳಲ್ಲಿ ವಾರಕ್ಕೆ ಒಮ್ಮೆ ನಡೆಯುವ ಅಭಿಷೇಕ ಸಮಯದಲ್ಲಿ ಭಕ್ತರು ಒಬ್ಬರಿಗೆ ೫ ರೂಪಾಯಿನಂತೆ ಶುಲ್ಕ ನೀಡಿ ಅಭಿಷೇಕ ದರ್ಶನ ಹೊಂದಬಹುದು. ವಿವಿಧೆಡೆಗಳಲ್ಲಿರುವ ಈ ದೇವಾಲಯಗಳೆಂದರೆ--

1. ಶ್ರೀ ವೇದನಾರಾಯಣಸ್ವಾಮಿ ಆಲಯ --ನಾಗುಲಾಪುರಂ.
2. ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ಆಲಯ --ನಾರಾಯಣವನಂ.
3. ಶ್ರೀ ವೇಣುಗೋಪಾಲಸ್ವಾಮಿ ಆಲಯ --ಕಾರ್ವೇಟಿನಗರ.
4. ಶ್ರೀ ಪ್ರಸನ್ನ ವೆಂಕಟೇಶ್ವರಸ್ವಾಮಿ ಆಲಯ --ಅಪ್ಪಲಾಯಗುಂಟ.
5. ಶ್ರೀ ವೆಂಕಟೇಶ್ವರಸ್ವಾಮಿ ಆಲಯ --ಶ್ರೀನಿವಾಸಮಂಗಾಪುರ.
6. ಆಲಯಸಮುದಾಯ --ಹೃಷೀಕೇಶ.

ಯಾತ್ರಿಕ ಭಕ್ತರು ಈ ಅವಕಾಶವನ್ನು ಉಪಯೋಗಿಸಿಕೊಂಡು ದೇವರ ಅನುಗ್ರಹಕ್ಕೆ ಪಾತ್ರರಾಗಬೇಕೆಂದು ಕೋರಲಾಗಿದೆ.

ತಿ. ತಿ. ದೇವಸ್ಥಾನಗಳು,
--ತಿರುಪತಿ.



ಹೀಗಾಗಿ ಪೊಯ್ಗೈ ಆಳ್ವಾರರಂತೆಯೇ ಭೂದತ್ತಾಳ್ವಾರರೂ ತಿರುಮಲೆಯಲ್ಲಿನ ವಿಷ್ಣುದೇವಾಲಯವನ್ನು ಅತ್ಯಂತ ಭಕ್ತಿಯಿಂದ ನೆನೆಯುತ್ತಾರೆ ಎನ್ನಬೇಕು. ಈ ತಿರುವಂದಾದಿಯಲ್ಲಿ ಸಾಧಾರಣ ಶ್ರೀವೈಷ್ಣವರ ಪೂಜಾ ವಿಧಾನಗಳ ವಿವರಗಳನ್ನು ಕಾಣಬಹುದು. ಇತರ ಆಳ್ವಾರರಂತೆಯೇ ಇವರಲ್ಲಿಯೂ ಕಂಡುಬರುವ ಅಂಶವೆಂದರೆ - ಅತಿಶ್ರೇಷ್ಠ ಆರಾಧನಾ ವಿಧಾನವೆಂದರೆ ಪರಂಪರಾಗತ ವೈದಿಕ ವಿಧಾನವೇ ಆದರೂ ಅದು ಎಲ್ಲರಿಗೂ ಸಾಧ್ಯವಿಲ್ಲ. ಇದನ್ನು ಅನುಸರಿಸಬಲ್ಲವರಿಗೆ ಇದು ಅತಿಶ್ರೇಷ್ಠವೇ ಆದರೂ, ಇತರ ಆರಾಧನಾ ಮಾರ್ಗ - ಇಷ್ಟೇ ಫಲಕಾರಿಯಾದ ಸುಲಭಮಾರ್ಗವೆಂದರೆ - ಉತ್ತಾರಕವಾದ ನಾಮಜಪ ಮಾರ್ಗ. ಭಗವತ್ ನಾಮಸ್ಮರಣೆಯಿಂದ ನಮ್ಮೆಲ್ಲರ ಕಷ್ಟ ಪರಿಹಾರವಾಗುತ್ತದೆ ಎಂಬುದು.

ಪೇಯಾಳ್ವಾರರೂ ವೆಂಗಡವನ್ನು ವರ್ಣಿಸಿದ್ದಾರೆ. ಅವರ ತಿರುವಂದಾದಿಯಲ್ಲಿನ ಹದಿನಾಲ್ಕನೇ ಪಾಶುರದಲ್ಲಿ ವೆಂಗಡವಿದೆ. ೨೬, ೩೦, ೩೨ ನೇ ಪಾಶುರಗಳಲ್ಲಿ ವೆಂಗಡದ ಬಗ್ಗೆ ಸಾಮಾನ್ಯ ಉಲ್ಲೇಖವಿದೆ. ಪುನಃ ೫೮ನೆಯ ಪಾಶುರದಲ್ಲಿನ ಕಡೆಯ ಸಾಲಿನಲ್ಲಿ ವೆಂಗಡದ ದೇವರ ಬಗ್ಗೆ ಹೇಳುತ್ತ ನಾರಾಯಣನ ತ್ರಿವಿಕ್ರಮಾವತಾರದಲ್ಲಿ ಬಲಿಯನ್ನು ಮೂರಡಿ ನೆಲದ ದಾನ ಬೇಡಿ 'ತನ್ನ ತೀವ್ರವಾದ ಬುದ್ಧಿಮತ್ತೆಯಿಂದ ಧರೆಯನ್ನುದ್ಧರಿಸಿದ ದೇವರು' ಎನ್ನುತ್ತಾರೆ. ೫೯ ನೇ ಪಾಶುರದಲ್ಲಿ ವಿಷ್ಣುವನ್ನು ಆಶ್ರಯಿಸುವುದರ ಮೂಲಕ ತಮಗೆ ಮೋಕ್ಷ ದೊರೆಯುವುದೆಂಬ ಸನ್ಮಾರ್ಗ ಪ್ರವರ್ತನೆಯಿಂದಾಗಿ ತಮಗೆ ತೃಪ್ತಿಯಿದೆ ಎನ್ನುವರು. ಹೀಗೆಯೇ ೬೯, ೭೦, ೭೧, ೭೨, ೭೩, ೭೫ ರಲ್ಲಿ ವೆಂಗಡದ ಬಗ್ಗೆ ಸಾಮಾನ್ಯ ಉಲ್ಲೇಖಗಳಿವೆ. ೬೯, ೭೦ ರಲ್ಲಿ ಸಾಮಾನ್ಯ ಲಕ್ಷಣಗಳನ್ನು ಹೇಳಿದರೆ, ೭೧ ರಲ್ಲಿ ೬೮ ರಲ್ಲಿ ಹೇಳಿದ ಘಟನೆಗಳೇ ಪುನರಾವೃತವಾಗಿವೆ. ೭೨ ರಲ್ಲಿ ವೆಂಗಡದಲ್ಲಿ ಯುವಕರ ರಾಜಕುವರನ ಮನೆಯಿದೆ (ಇಲ್ಲಂ ಕುಮರರ್ ಕೋಮಾನ್) ಎನ್ನುವರು. ೭೩ ರಲ್ಲಿ ಸಾಮಾನ್ಯ ಉಲ್ಲೇಖವಿದ್ದರೆ ೭೫ ರಲ್ಲಿ ತಿರುಮಲೆಯು ವಿಷ್ಣು - ಕೃಷ್ಣರ ಬೆಟ್ಟವೆಂಬ ವರ್ಣನೆಯಿದೆ. ೭೬ ರಲ್ಲಿ ವೇಕ್ಕಾದಲ್ಲಿ ದೇವರಿಗೆ ಹೂವನ್ನರ್ಪಿಸಿ, ದೇವರ ಮುಂದೆ ಕೈಮುಗಿದು ನಿಂತರೆ ಯಾವುದೇ ದುಃಖ ಪಾಪವೂ ಅವನನ್ನು ಸೋಕದು. ಇದಕ್ಕಾಗಿ, ಬೆಟ್ಟಗಳ ಮೇಲೆ, ನೀರಿನಲ್ಲಿ, ಬೆಂಕಿಯಲ್ಲಿ ನಿಂತು ತಪಸ್ಸು ಮಾಡಬೇಕಾಗಿಲ್ಲ ಎನ್ನುವರು ೭೭, ೭೮ ರಲ್ಲಿ ವಿಷ್ಣುವಿನಲ್ಲಿನ ಅಚಂಚಲ ಭಕ್ತಿಯಿಂದ ಆಪದಗಳಿಂದ ದೂರವಾಗಿ ನಿಶ್ಚಯವಾಗಿಯೂ ಮೋಕ್ಷ ಪಡೆಯಬಹುದೆಂದು ಹೇಳುವರು. ೮೯ ನೇ ಪಾಶುರವು ವೆಂಗಡವು ಮುರಳೀಧರನ ಪವಿತ್ರಧಾಮವಾಗಿದೆ ಎನ್ನುತ್ತದೆ. ೯೦, ೯೩ ನೆ ಪಾಶುರಗಳು ಸಾಮಾನ್ಯ ಉಲ್ಲೇಖವಾದರೆ ೯೪ ನೇ ಪಾಶುರ ಧ್ಯಾನದ ದೀಪದಿಂದ ತನ್ನಲ್ಲಿ ಬೆಳಕುಂಟಾಗಿಸಿದ ಅವನನ್ನು ತನ್ನ ಹೃದಯದಲ್ಲಿ ಕುಳ್ಳಿರಿಸಿಕೊಂಡು ನಿಲ್ಲಿಸಿ, ಪ್ರತಿಷ್ಠೆ ಮಾಡಿಕೊಂಡೆ ಎಂದು ತೃಪ್ತಿಪಟ್ಟಿದ್ದಾರೆ.

ಈ ಮೂವರು ಆಳ್ವಾರರೂ ಸಮಕಾಲೀನರಾಗಿದ್ದರೆಂಬುದರಿಂದ ಇವರನ್ನು ಮೊದಲಾಳ್ವಾರರೆಂದು ಕರೆಯಲಾಗಿದೆ. ಇವರುಗಳ ತಿರುವಂದಾದಿಗಳು ಎಷ್ಟು ಸಮಾನ ಅಂಶಗಳನ್ನು ಹೊಂದಿವೆಯೆಂದರೆ ಅವುಗಳಿಂದಾಗಿಯೇ ಮೂವರೂ ಏಕಕಾಲದಲ್ಲಿ ಪ್ರವರ್ಧಮಾನರಾಗಿರಬೇಕು ಎಂದು ತೀರ್ಮಾನಿಸಬಹುದು. ವಿಷ್ಣುವಿನ ಭಕ್ತರಾಗಿದ್ದದ್ದರಿಂದ ಹಲವಾರು ವೈಷ್ಣವಕ್ಷೇತ್ರಗಳ ಬಗ್ಗೆ ಹೇಳುತ್ತ ತಿರುಮಲೆಯ ಬಗ್ಗೆ ಹೆಚ್ಚಿಗೆ ಹೇಳಿದರು. ಇದರಿಂದಾಗಿ ವ್ಯಾಖ್ಯಾನಕಾರರು ಇವರ ಪಾಶುರಗಳು ವೆಂಗಡಕ್ಕೇ ಮೀಸಲೆಂದು ಭಾವಿಸಿದರು.

ವೈದಿಕ ಆಚಾರಗಳನ್ನು ಬಹುಮುಖವೆಂದು ಈ ಆಳ್ವಾರರು ಉಲ್ಲೇಖಿಸುತ್ತಾರೆ. ಮೊದಲ ತಿರುವಂದಾದಿಯಲ್ಲಿ ಪೊಯ್ಗೈ ಆಳ್ವಾರ್ ಹೇಳುತ್ತಾರೆ -- 'ಇನ್ನು ಮುಂದೆ ನರಕವನ್ನಾರು ಪ್ರವೇಶಿಸುತ್ತಾರೆ? ಅದರ ಬಾಗಿಲು ಮುಚ್ಚಿರಿ, ಯಾವ ದಾಕ್ಷಿಣ್ಯವೂ ಬೇಡ. ಕಾರಣ ನೇರಿಳೆಮರದ ಈ ನೆಲ ನಾರಾಯಣನೇ ಸರ್ವರನ್ನೂ ರಕ್ಷಿಸುವನೆಂಬುದನ್ನು ಚೆನ್ನಾಗಿ ತಿಳಿದಿದೆ.' ಇದರಿಂದಾಗಿ ಅಂದಿಗೆ ಧರ್ಮ ಬೋಧನೆ ಪಡೆದಿದ್ದ ವ್ಯಾಪ್ತಿ ಹಾಗೂ ಪ್ರಸಿದ್ಧಿಯನ್ನು ತಿಳಿಯಬಹುದು. ಈ ಭಕ್ತಿ ತತ್ವ ಬೆಳೆದ ವಾತಾವರಣವನ್ನು, ಮುಟ್ಟಿದ ಮೇಲ್ಮೆಯನ್ನೂ ತಿಳಿಯಬಹುದು.

ಶಿಲಪ್ಪದಿಕಾರದಲ್ಲಿ ತಿರುಮಲೆ : ತಮಿಳು ಪ್ರಾಚೀನ ಮಹಾಕಾವ್ಯ ಶಿಲಪ್ಪದಿಕಾರದ ಕರ್ತೃ ವೈದಿಕನಲ್ಲವಾದರೂ ತಿರುಮಲೆಯು ವಿಷ್ಣುದೇವಾಲಯದ ಸ್ಥಳವೆಂದು ಹೇಳಿದ್ದಾನೆ. ಈ ಕೃತಿಯ ಕರ್ತೃ ಇಳಂಗೋ ಅಡಿಗಳ್ ತನ್ನ ಪುಸ್ತಕದ ೨೧ನೇ ಅಧ್ಯಾಯದಲ್ಲಿ ಬೆಟ್ಟದ ಮೇಲಿನ ವೆಂಕಟೇಶ್ವರನನ್ನು ವರ್ಣಿಸಿರುವನುದು ಹೀಗೆ--

ತುಂಬಿ ಹರಿಯುವ ಝರಿಗಳಿಂದಾವೃತವಾದ
ಸೂರ್ಯಚಂದ್ರರ ಪ್ರಕಾಶದಲಿ ಹೊಳೆಯುವ
ವೆಂಗಡದ ಶಿಖರಾಗ್ರದ ಕೆನೆಯಲ್ಲಿ
ಮಿಂಚಿನಾಗಸದ ಮಧ್ಯದ ನೀಲಿಮೋಡದೊಲು

ಕಾಮನ ಬಿಲ್ಲಿನೆಲ್ಲ ವಿಭವದಲ್ಲಿ
ನಿಂತಿರುವ ಮಹಾನುಭಾವ ರಕ್ತನೇತ್ರ
ಕುಸುಮ ಸದೃಶಮುಡುಗೆಯಲ್ಲಿ,
ದೆಳಗುವಹಾರದೊಡನೆ
ಕಮಲಕರದಲಿ ಚಕ್ರಹಿಡಿದವ,
ಹಾಲುಬಿಳಿಶಂಖ ಹಿಡಿದವನು

--ಮಲೈನಾಡುವಿನ ಮಾಂಗಾಡುವಾಸಿಯಾದ ಒಬ್ಬ ಬ್ರಾಹ್ಮಣ ಯಾತ್ರಿಕನ ಬಾಯಲ್ಲಿ ಈ ವಿವರಣೆ ಹೊರಬರುತ್ತದೆ. ಈ ಯಾತ್ರಿಕನು ಪಾಂಡ್ಯನಾಡಿನಲ್ಲಿ ಹಾಯ್ದು ಹೋಗುವಾಗ ರಾತ್ರಿಯಲ್ಲಿ ಚೋಳ ರಾಜಧಾನಿ ಉರೈಯೂರಿನಲ್ಲಿ ತಂಗಿದ್ದ. ತನ್ನ ಯಾತ್ರೆಯ ಸಂದರ್ಭದಲ್ಲಿ ಈತ ಶಿಲಪ್ಪದಿಕಾರದ ನಾಯಕ ಕೋವಲನ್ ಅನ್ನು ಸಂಧಿಸಿ, ಮಾತನಾಡುವಾಗ ಪಾಂಡ್ಯನಾಡನ್ನು ಕುರಿತು ಹೇಳಿ ತಾನು ತೀರ್ಥ ಯಾತ್ರೆಗಾಗಿ ಹೊರಟಿರುವುದಾಗಿಯೂ ಶ್ರೀರಂಗ ಹಾಗೂ ವೆಂಗಡಗಳ ವಿಷ್ಣು ದೇವಾಲಯಗಳನ್ನು ಕಾಣುವುದಾಗಿಯೂ ಹೇಳುವನು. ತಿರುಮಲೆಯ ಉಲ್ಲೇಖ ಈ ಸಮಯದಲ್ಲಿ ಬರುತ್ತದೆ.

ಈ ಹೇಳಿಕೆಯಿಂದಾಗಿ ಅಂದಿನ ಕಾಲದಲ್ಲಿ ತಿರುಮಲೆಯನ್ನು ಒಂದು ಪವಿತ್ರ ವೈಷ್ಣವ ಕೇಂದ್ರವೆಂದು ಪರಿಗಣಿಸಲಾಗುತ್ತಿತ್ತು ಎಂಬುದು ಖಚಿತವಾಗುತ್ತದೆ. ಇಲ್ಲಿ ಉಲ್ಲೇಖಿತವಾದ ಶ್ರೀರಂಗ ಹಾಗೂ ತಿರುಮಲೆಗಳ ಮತ್ತು ತಿರುಮಾಲ್ ಇರುಂಸೋಲೈಗಳ ಆಲಯಗಳು, ಅಂದಿಗೇ ತಿರುಮಲೆಯಲ್ಲಿನ ವಿಷ್ಣು ದೇವಾಲಯ ಬಹುಪ್ರಸಿದ್ಧವಾಗಿದ್ದಿತೆಂಬುದನ್ನೂ, ಅದರ ಪ್ರಸಿದ್ಧಿ ಪಶ್ಚಿಮ ಸಮುದ್ರದವರೆಗೆ ಹರಡಿದ್ದಿತೆಂದೂ, ಇಂದಿನಂತೆಯೇ ಅಂದೂ ಜನರು ಈ ತೀರ್ಥ ಕ್ಷೇತ್ರಯಾತ್ರೆಗೆ ಹೋಗುತ್ತಿದ್ದರೆಂದೂ ನಿರ್ದ್ವಂದ್ವವಾಗಿ ಹೇಳಿಕೆ ನೀಡುವುದರಿಂದಲೇ ತಿರುಮಲೆಯು ವಿಷ್ಣುವಿನ ದೇವಾಲಯವನ್ನು ಹೊಂದಿ ಪ್ರಸಿದ್ಧವಾಗಿದ್ದಿತು ಎಂಬುದು ಸ್ಪಷ್ಟವಾಗುತ್ತದೆ.

ತಿರುಮಳಿಶೈ ಆಳ್ವಾರ್ : ಈ ಆಳ್ವಾರರೂ ವಿಷ್ಣುವನ್ನು ನೂರು ಅಂತಾದಿಗಳಲ್ಲಿ ಕೀರ್ತಿಸಿದ್ದಾರೆ. ೪೨ ಹಾಗೂ ೪೩. ನೇ ಪಾಶುರಗಳಲ್ಲಿ ಆಳ್ವಾರರು ವೆಂಗಡದಲ್ಲಿ ಬ್ರಹ್ಮ ಹಾಗೂ ಶಿವ ಇಬ್ಬರೂ ಅರ್ಚನೆಗೈಯ್ಯುತ್ತಾರೆಂದು ತಿಳಿಸುತ್ತಾರೆ.

ಮೊದಲನೆಯ ಉಲ್ಲೇಖ ೩೧ ನೇ ಪಾಶುರದಲ್ಲಿದೆ. ಇಲ್ಲಿ ಕೊಟ್ಟಿಯೂರಿನ ಇತರ ವೈಷ್ಣವ ಕ್ಷೇತ್ರಗಳೊಡನೆ ವೆಂಗಡದ ಸಾಧಾರಣ ಉಲ್ಲೇಖವಿದೆ. ೭೯ನೇ ಪಾಶುರದಲ್ಲೂ ಸಾಮಾನ್ಯ ಹೆಸರಿದೆ. ೪೦ನೇ ಪಾಶುರದಲ್ಲಿ ಆಳ್ವಾರರು ವೆಂಗಡದ ದೈವದಲ್ಲಿ ತನಗೆ ಭಕ್ತಿಯುಂಟೆಂದು ಹೇಳುತ್ತ 'ವಿಜ್ಞಾನದಲ್ಲಿ ಅತಿಹಿರಿಯಳಾದವಳಿಗೆ ಪ್ರಿಯನಾದ ಅವನ ಪಾದಗಳ ಬಲೆಯಲ್ಲಿ ಬಿಡಿಸಿಕೊಳ್ಳಲಾಗದಂತೆ ಸೇರಿ ಹೋಗಿದ್ದೇನೆ' ಎನ್ನುತ್ತಾರೆ. ೪೧ ನೇ ಪಾಶುರದಲ್ಲಿ ಆಸಕ್ತಿದಾಯಕವಾದ ರೀತಿಯಲ್ಲಿ ವೆಂಗಡದ ಈ ಬೆಟ್ಟವನ್ನು ವರ್ಣಿಸುವಾಗ ಎರಡು ಅಂಶ ಪ್ರಕಟವಾಗುತ್ತವೆ. ಮೊದಲನೆಯದು ಬೆಟ್ಟದಲ್ಲಿನ ಝರಿಗಳು ನೀರನ್ನು ಕೆಳಕ್ಕೆ ತರುವಾಗ ಮುತ್ತುಗಳನ್ನು ಹೊರಹಾಕುತ್ತವೆ. ಇದರಿಂದಾಗಿ ಝರಿ ಹರಿವಾಗಣ ಝುಳು ಝುಳುನಾದ ಮುಖ್ಯವಾಗುತ್ತದೆ. ವೆಂಗಡದಲ್ಲಿ ಇನ್ನೊಂದು ಸಾಮಾನ್ಯ ಶಬ್ದವೆಂದರೆ ಇಲ್ಲಿ ಓಣಂ ಹಬ್ಬದ ದಿನಗಳಲ್ಲಿ ನಡೆಯುವ ಉತ್ಸವಗಳ ಕಲರವ. ಈ ನಕ್ಷತ್ರೋತ್ಸವ ವಿಷ್ಣುವಿನೊಂದಿಗೆ ಸಂಬಂಧ ಹೊಂದಿದ್ದು ಅವನ ಹುಟ್ಟಿಗೆ (ಹುಟ್ಟಿಲ್ಲದವನಿಗೆ) ಹೊಂದಿಕೊಂಡದ್ದು. ಈ ನಕ್ಷತ್ರದ ಹಬ್ಬ ಹರಿದಿನಗಳು ತಿರುಮಲೆಗೆ ವಿಶಿಷ್ಟವಾದದ್ದು ಹಾಗೂ ಶ್ರೀನಿವಾಸ ದೇವರಿಗೆ ಲಕ್ಷ್ಮೀದೇವಾಲಯಕ್ಕೆ ವಿಶಿಷ್ಟವಾದದ್ದು. ವರ್ಷದಲ್ಲಿ ಅತಿ ಪವಿತ್ರವಾದ ದಿನವೆಂದರೆ ಪೂರ್ವಾಭಾದ್ರ ತಿಂಗಳಿನಲ್ಲಿ ಬರುವ ಶ್ರವಣನಕ್ಷತ್ರದ ದಿನ. ಮುಂದಿನ ಪಾಶುರದಲ್ಲಿ ವೆಂಗಡವನ್ನು ಕುರಿತು ಹೇಳುತ್ತ ಆಳ್ವಾರರು ತಿರುಮಲೆಯ ದೇವರ ಪಾದಗಳಲ್ಲಿ ಕಮಲಪುಷ್ಪಗಳನ್ನು ಶಿವ ಬ್ರಹ್ಮರೂ ಇಟ್ಟು ಅರ್ಚಿಸುವವರಾಗಿ, ಸರ್ವಪಾಪಹರನಾದ ಈ ದೇವರ ಸನ್ನಿಧಿ ಸೇರಿ ಅರ್ಚಿಸಲು ಎಲ್ಲ ಜನರಿಗೂ ಕರೆನೀಡುತ್ತಾರೆ. ಮುಂದಿನ ಪಾಶುರದಲ್ಲಿಯೂ ಬ್ರಹ್ಮಶಿವರು ವೆಂಗಡದ ದೈವವನ್ನು ಅರ್ಚಿಸುವ ಚಿತ್ರವಿದೆ. ಆಳನೇ ಪಾಶುರ ಗಮನಾರ್ಹವಾಗಲು ಕಾರಣ ಆಳ್ವಾರರು ಯುವಕರನ್ನು ವೆಂಗಡದ ದೈವವನ್ನು ಆರಾಧಿಸಲು ಒತ್ತಾಯಿಸುವುದೇ ಆಗಿದೆ.

ಸಾಮಾನ್ಯವೇ ಆದರೂ ೯೦ನೇ ಪಾಶುರದಲ್ಲಿ ಮತ್ತೆ ವೆಂಗಡದ ಉಲ್ಲೇಖವಿದೆ. ತಿರುಮಳಿಶೈ ಆಳ್ವಾರರ ಈ ನೂರು ಪಾಶುರಗಳಲ್ಲಿ ಪದೇ ಪದೇ ಅವಧಾರಿತವಾಗುವ ಅಂಶವೆಂದರೆ ವೆಂಗಡವು ವಿಷ್ಣುವಿನ ಪವಿತ್ರ ಕ್ಷೇತ್ರಗಳಲ್ಲಿ ಒಂದು ಎಂಬುದೂ, ಇಲ್ಲಿರುವ ದೈವ ವಿಷ್ಣುವಿನ ಹೊರತು ಬೇರಲ್ಲವೆಂಬುದು. ಇತರ ದೇವರುಗಳ ವಿಶೇಷವಾಗಿ ಬ್ರಹ್ಮಶಿವರುಗಳ ಉಲ್ಲೇಖವಿದ್ದರೂ ಅವನ ದೇಹದ ಭಾಗಗಳಾಗಿ ಮಾತ್ರ. ಏನೇ ಆದರೂ ಇಲ್ಲಿ ಆರಾಧಿತನಾಗುವವ ವಿಷ್ಣು.

ನಮ್ಮಾಳ್ವಾರ್ : ವೈಷ್ಣವ ಸಂಪ್ರದಾಯದಲ್ಲಿ ಸಾಮಾನ್ಯವಾಗಿ ನಮ್ಮಾಳ್ವಾರ್ ಅವರನ್ನು ಅತಿಶ್ರೇಷ್ಠರೆನ್ನಲಾಗಿದೆ. ಅವರ ಪಾಶುರಗಳನ್ನು ಸರ್ವವೇದಸಾರ ಎನ್ನಲಾಗಿದೆ. ಅವರ ತಿರುವಾಯ್ಮೊಳಿಯನ್ನು ತಮಿಳು ವೇದವೆನ್ನಲಾಗಿದೆ. ಪ್ರಾಚೀನ ತಮಿಳರು ವೇದ ಉಪನಿಷತ್ತುಗಳಲ್ಲಿನ ಪ್ರತ್ಯೇಕತೆಯನ್ನು ವೇದಗಳನ್ನು ವಾಯ್ಮೊಳಿ ಎಂದೂ ಉಪನಿಷತ್ತುಗಳನ್ನು ಮರ್ೖ ಎಂದೂ ಕರೆದು ಗುರುತಿಸಿರಬಹುದಾದರೂ ಮರ್ೖ ಎಂಬುದೇ ಇಂದು ಇಡೀ ವೈದಿಕ ಸಾಹಿತ್ಯಕ್ಕೆ ಅನ್ವಯಿಸುತ್ತದೆ.

ನಮ್ಮಾಳ್ವಾರರು ಮೊದಲಾಳ್ವಾರರ ನಂತರದವರೂ, ತಿರುಮಂಗೈ ಆಳ್ವಾರರೊಡನೆ ಕೊನೆಯಾಗುವ ಆಳ್ವಾರರ ಸಮಕಾಲೀನರಾದವರೂ ಎಂದು ಪರಿಗಣಿತರಾಗಿದ್ದಾರೆ. ಮೊದಲಾಳ್ವಾರರು ವೆಣ್ಬಾ ವೃತ್ತದಲ್ಲಿ ಪಾಶುರ ರಚನೆ ಮಾಡಿದ್ದರೆ ನಾಲ್ಕನೆಯವರು ವಿರುತ್ತಂ ಛಂದಸ್ಸಿನಲ್ಲಿ ಹಾಡಿದರು.

ಮೊದಲಾಳ್ವಾರರಂತಲ್ಲದೆ ನಮ್ಮಾಳ್ವಾರರ ತಿರುಮಲೆಯ ಉಲ್ಲೇಖ ಒಂದು ಸಾಹಿತ್ಯಕ ಅಭಿವ್ಯಕ್ತಿ. ತಿರುವಾಯ್ಮೊಳಿಯ ಹತ್ತು ಪಾಶುರಗಳನ್ನು ತಿರುಮಲೆಗೇ ಮೀಸಲಿಟ್ಟಿದ್ದಾರೆ. ಇಲ್ಲಿನ ಶ್ರೇಷ್ಠದೇವಾಲಯದ ವಿಶೇಷ ವರ್ಣನೆ ಮಾಡಿದ್ದಾರೆ. ಇತರ ದಶಕಗಳಲ್ಲೂ ಅಲ್ಲಲ್ಲಿ ತಿರುಮಲೆಯ ಬಗ್ಗೆ ಅಪ್ರತ್ಯಕ್ಷವಾಗಿ ಅಲ್ಲಲ್ಲಿ ಹೇಳಿದ್ದರೂ, ಈ ಗುಡಿಯನ್ನೇ ಮನಸಿನಲ್ಲಿಟ್ಟುಕೊಂಡು ಹಾಡಿರುವುದು ಸ್ಪಷ್ಟವಾಗಿದೆ.

ನಮ್ಮಾಳ್ವಾರರ ತಿರುವಿರುತ್ತಂ ನಲ್ಲಿ ತಿರುಮಲೆಯ ಬಗ್ಗೆ ಏಳು ಉಲ್ಲೇಖಗಳಿವೆ. ತಿರುಪತಿಯ ಸಮೀಪದ ಬೆಟ್ಟಗಳಲ್ಲಿ ಶೋಭಾಕರವಾದ ಪುಷ್ಪಗಳ ತೋಟಗಳು ಉಂಟು. ತಿರುಮಲೆಯ ಬಗ್ಗೆ ನೇರವಾಗಿ ಹೇಳಿಲ್ಲವಾದರೂ ಪೆರಿಯ ತಿರುವಂದಾದಿಯಲ್ಲಿನ ಏಳನೇ ಪಾಶುರದಲ್ಲಿ ವಿಷ್ಣುವಿನ ವಕ್ಷಸ್ಥಲದಲ್ಲಿನ ಲಕ್ಷ್ಮಿಯನ್ನು, ತಿರುಮಲೆಯ ದೇವರ ಹೆಸರು - ಶ್ರೀನಿವಾಸ - ಎಂಬುದರ ಅರ್ಥ ಇದೇ - ಕುರಿತು ಹೇಳಲಾಗಿದೆ.

## ಇತರ ಆಳ್ವಾರರು

ನಮ್ಮಾಳ್ವಾರರ ನಂತರ ಏಳು ಮಂದಿ ಆಳ್ವಾರರಿದ್ದು ಎಲ್ಲರೂ ತಮ್ಮ ಪ್ರಬಂಧಗಳಲ್ಲಿ ತಿರುಮಲೆಯನ್ನು ಕುರಿತು ಹಾಡಿದ್ದಾರೆ.

ವೈಷ್ಣವ ದೇವಾಲಯಗಳಲ್ಲಿ ಸಾಮಾನ್ಯವಾಗಿ ಆರಾಧಿಸಲ್ಪಡುವ ಗೋದಾದೇವಿಯ ನಾಚ್ಚಿಯಾರ್ ತಿರುಮೊಳಿಯ ಹಾಗೂ ಚೇರದೇಶದ ರಾಜರಾಗಿದ್ದ ಕುಲಶೇಖರ ಆಳ್ವಾರರನ್ನು ವಿಶೇಷವಾಗಿ ಗುರುತಿಸಬೇಕು. ಕಾಲದಲ್ಲಿ ಅರ್ವಾಚೀನರಾದ ತಿರುಮಂಗೈ ಆಳ್ವಾರರು ತಿರುಮಲೆಯ ದೇವರನ್ನು ಹತ್ತಕ್ಕಿಂತ ಹೆಚ್ಚು ಬಾರಿ ಹೆಸರಿಸುವರು.

ಹೀಗಾಗಿ ಕ್ರಿ.ಶ. ೩ನೇ ಶತಕದಿಂದ ೮ನೇ ಶತಕದವರೆಗೆ ಹರಡಿರಬಹುದಾದ ಕಾಲಘಟ್ಟದಲ್ಲಿ ತಿರುಮಲೆಯಲ್ಲಿ ವೆಂಗಡವೆಂಬ ದೇವಾಲಯ ವಿಷ್ಣುವಿಗೆ ಮೀಸಲಾಗಿದ್ದತು. ಎಂದು ಆಳ್ವಾರರ ಸಾಹಿತ್ಯಾಧಾರದಲ್ಲಿ ನಿರ್ಧರಿಸಬಹುದು. ಜ್ಞಾತ ಇತಿಹಾಸದ ಈ ದಾಖಲೆಗಳು ಕ್ರಿ.ಶ. ೮ನೇ ಶತಕದವರೆಗೆ ತಿರುಮಲೆಯನ್ನು ಒಂದು ಪವಿತ್ರಕ್ಷೇತ್ರವೆಂದು ಗುರುತಿಸಿದೆ. ಕ್ರಿ.ಶ. ೮ನೇ ಶತಕದ ನಂತರ ಶಾಸನಾಧಾರಗಳು ತಿರುಮಲೆಯ ಬಗ್ಗೆ ಆರಂಭವಾಗುವವು.

(ಮುಂದಿನ ತಿಂಗಳು -- ಕ್ರಿ.ಶ. 9ನೇ ಶತಮಾನದಿಂದ ತಿರುಮಲೆಯ ಆಲಯ)



# ತಿಂಗಳಿನ ಮುಖ್ಯದಿನಗಳು

## ಸೆಪ್ಟೆಂಬರ್ --- 1996

5 ಗುರುವಾರ :
ಶ್ರೀಕೃಷ್ಣಾಷ್ಟಮಿ.
ತಿರುಮಲೆಯಲ್ಲಿ ಗೋಕುಲಾಷ್ಟಮಿ ಆಸ್ಥಾನ.

14 ಶನಿವಾರ :
ತಿರುಮಲೆಯಲ್ಲಿ ಬ್ರಹ್ಮೋತ್ಸವದ ಅಂಕುರಾರ್ಪಣೆ.

15 ಭಾನುವಾರ :
ತಿರುಮಲೆಯಲ್ಲಿ ಬ್ರಹ್ಮೋತ್ಸವದ ಧ್ವಜಾರೋಹಣ.

16 ಸೋಮವಾರ :
ವಿನಾಯಕ ಚೌತಿ.

19 ಗುರುವಾರ :
ತಿರುಮಲೆಯಲ್ಲಿ ಗರುಡೋತ್ಸವ.

20 ಶುಕ್ರವಾರ :
ತಿರುಮಲೆಯಲ್ಲಿ ಸ್ವರ್ಣರಥರಂಗ ಡೋಲೋತ್ಸವ.

22 ಭಾನುವಾರ :
ತಿರುಮಲೆಯಲ್ಲಿ ರಥೋತ್ಸವ.

23 ಸೋಮವಾರ :
ತಿರುಮಲೆಯಲ್ಲಿ ಬ್ರಹ್ಮೋತ್ಸವದ ಅವಭೃಥ.
ವೇದಾಂತದೇಶಿಕರ ವರ್ಷತಿರುನಕ್ಷತ್ರ.

24 ಮಂಗಳವಾರ :
ವಾಮನ ಜಯಂತಿ.

26 ಗುರುವಾರ :
ಅನಂತಪದ್ಮನಾಭ ವ್ರತ.

27 ಶುಕ್ರವಾರ :
ಮಹಾಲಯ ಪಕ್ಷ ಪ್ರಾರಂಭ.



# ವಾರ್ತಾಲಹರಿ



## ಶ್ರೀನಿವಾಸ ಮಂಗಾಪುರದಲ್ಲಿ ಸಾಕ್ಷಾತ್ಕಾರ ವೈಭವ

ಶ್ರೀನಿವಾಸ ಮಂಗಾಪುರದ ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ಆಲಯದಲ್ಲಿ ಜುಲೈ 19, 20, 21 ರಂದು ಮೂರು ದಿನಗಳ ಕಾಲ ಸಾಕ್ಷಾತ್ಕಾರ ವೈಭವೋತ್ಸವ ಯಶಸ್ವಿಯಾಗಿ ನಡೆಯಿತು. ತದಂಗವಾಗಿ ನಡೆದ ಊರಮೆರವಣಿಗೆ, ಊಂಜಲ್ ಸೇವೆಗಳು ಹೆಚ್ಚಿನ ಜನವನ್ನು ಆಕರ್ಷಿಸಿದವು. ಭಕ್ತರ ಅನುಕೂಲಕ್ಕಾಗಿ ತಿ.ತಿ. ದೇ. ಗ್ರಂಥ ಪ್ರದರ್ಶನ ಮಾರಾಟ ಮಳಿಗೆಯನ್ನೂ ತೆರೆಯಲಾಗಿದ್ದಿತು.

## ತಿರುಮಲೆಯಲ್ಲಿ ಜಲನಿಧಿ

ತಿರುಮಲೆಯಲ್ಲಿ ಯಾತ್ರಿಕಾವಸರವಾದ ನೀರಿನ ಕೊರತೆಯನ್ನು ಎದುರಿಸಲು ಶಾಶ್ವತವಾದ ಜಲ ಸೌಲಭ್ಯವನ್ನುಂಟುಮಾಡುವ ಯೋಜನೆಯ ಭಾಗವಾಗಿ, ಶ್ರೀ ವೆಂಕಟೇಶ್ವರ ಜಲನಿಧಿ ಎಂಬ ಹೆಸರಿನ ಟ್ರಸ್ಟ್ ಒಂದನ್ನು ಏರ್ಪಡಿಸಲು ತಿ.ತಿ.ದೇ. ನಿರ್ಣಯಿಸಿದೆ. ಜೂನ್ 29, ಜುಲೈ 1 ರಂದು ಹೈದರಾಬಾದಿನಲ್ಲಿ ಸಮಾವೇಶಗೊಂಡ ತಿ.ತಿ.ದೇ. ಧರ್ಮಕರ್ತರ ಮಂಡಳಿಯ ಸಮಾವೇಶ. ಈ ನಿರ್ಣಯವನ್ನು ಕೈಗೊಂಡು, ಇದಕ್ಕಾಗಿ ಆದಾಯಕರ ವಿಮುಕ್ತಿಯನ್ನು ಪಡೆಯಲು ಪ್ರಯತ್ನಿಸಬೇಕೆಂದು ತೀರ್ಮಾನಿಸಲಾಗಿದೆ.

ತಿರುಮಲೆಯಲ್ಲಿ ಯಾತ್ರಿಕ ವಿಶ್ರಾಂತಿ ಗೃಹ ನಿರ್ಮಾಣ ಮಾಡಲೂ ತೀರ್ಮಾನಿಸಲಾಗಿದೆ. ತಿರುಮಲೆಯಲ್ಲಿನ ಆಲಯದ ಬಂಗಾರದ ಬಾಗಿಲು, ವಿಮಾನ ಗೋಪುರಗಳಿಗೆ ಚಿನ್ನದ ಮುಲಾಮು ಮಾಡಿಸಬೇಕೆಂದೂ, ಸ್ವಾಮಿ ಪುಷ್ಕರಿಣಿಯ ನೀರಿನ ಪರಿಶುಭ್ರತೆಗಾಗಿ ಎರಡನೆಯ ಕಂಪ್ರೆಸರ್ ಏರ್ಪಾಡು ಮಾಡಲು ತೀರ್ಮಾನಿಸಲಾಯಿತು.

ಶ್ರೀನಿವಾಸ ಮಂಗಾಪುರದಲ್ಲಿ ತಿ.ತಿ.ದೇ. ಕಲ್ಯಾಣ ಮಂಟಪ ನಿರ್ಮಾಣ ಮಾಡಬೇಕೆಂದು ತೀರ್ಮಾನಿಸಲಾಗಿದೆ. ಸ್ವಾಮಿಯ ಆರ್ಜಿತಸೇವೆ, ಆರಾಧನಾ ವಿಷಯಗಳು, ಉದ್ಯೋಗ ಸಂಬಂಧ ವಿಷಯಗಳು, ಅನ್ನದಾನ ಯೋಜನೆಗಳನ್ನು ಪರಿಶೀಲಿಸಲು ಉಪ ಸಮಿತಿಗಳನ್ನು ಉಂಟುಮಾಡಲು ತೀರ್ಮಾನಿಸಲಾಗಿದೆ.

## ಧರ್ಮಪ್ರಚಾರ ಪರಿಷತ್ ಮುಂಗಡ ಪತ್ರ

ತಿ.ತಿ.ದೇ. ಧರ್ಮ ಪ್ರಚಾರ ಪರಿಷತ್ ಕಾರ್ಯಕ್ರಮಗಳಿಗಾಗಿ ಈ ವರ್ಷ ಎರಡು ಕೋಟಿ ಮೂವತ್ತು ಲಕ್ಷ ರೂಪಾಯಿಗಳು ಮಂಜೂರಾಗಿದೆ ಎಂದು ಧರ್ಮಪ್ರಚಾರ ಪರಿಷತ್ ಕಾರ್ಯದರ್ಶಿ ಶ್ರೀ ಸಮುದ್ರಾಲ ಲಕ್ಷ್ಮಣಯ್ಯನವರು ತಿಳಿಸಿದ್ದಾರೆ. ತಮಿಳುನಾಡು ಆಂಧ್ರಪ್ರದೇಶಗಳ ವೇದ ಪಾರಾಯಣದಾರರ ಸಂಭಾವನೆಗಾಗಿ ಅರವತ್ತು ಲಕ್ಷ ರೂಗಳು ಮಂಜೂರಾಗಿದೆ. ಪ್ರಚಾರ ಪರಿಷತ್ತಿಗೆ ಆಂಧ್ರಪ್ರದೇಶದಲ್ಲಿಯೇ ಅಲ್ಲದೆ ಬೆಂಗಳೂರು, ಮದರಾಸು, ಗುರುವಾಯೂರುಗಳೊಡನೆ ಸೇರಿ 23 ಶಾಖೆಗಳಿವೆಯೆಂದೂ ಇಲ್ಲೆಲ್ಲ ಕಾರ್ಯಕ್ರಮ ನಿರ್ವಹಣೆಗೆ ತಿಂಗಳಿಗೆ ಕನಿಷ್ಟ 10 ಸಾವಿರ ರೂಪಾಯಿ ವೆಚ್ಚ ಬರುವುದೆಂದೂ ಇದಕ್ಕಾಗಿ ಒಟ್ಟು 2 ಲಕ್ಷ 75 ಸಾವಿರ ರೂಪಾಯಿಗಳನ್ನು ತೆಗೆದಿಡಲಾಗಿದೆ ಯೆಂದು ಅವರು ನುಡಿದರು.

ಸಾಧಾರಣ ಗೃಹಸ್ಥರಿಗೂ ಪೂಜಾವಿಧಾನ, ಪ್ರಾಧಾನ್ಯಗಳನ್ನು ತಿಳಿಸಿಕೊಡುವ ಗ್ರಾಮೀಣ ಪ್ರಾಂತ್ಯಗಳಲ್ಲಿ ಪಾಂಚರಾತ್ರ, ವೈಖಾನಸ ಶೈವಾಗಮ ರೀತ್ಯಾ ಪೂಜಾ ವಿಧಿಗಳನ್ನು ನಿರ್ವಹಿಸಲು ಅರ್ಚಕರಿಗೆ ತಕ್ಕ ಶಿಕ್ಷಣ ನೀಡುವ ಕ್ರಮಗಳನ್ನು ಕೈಗೆತ್ತಿಕೊಳ್ಳಲಾಗುವುದು ಎಂದು ತಿಳಿಸಿದ ಅವರು ಪ್ರಸ್ತುತ ಆಂಧ್ರಪ್ರದೇಶದ ಜಿಲ್ಲೆಗಳಲ್ಲಿ ಮಾತ್ರವೇ ನಡೆಸುತ್ತಿರುವ ಪುರಾಣ ಪ್ರಬೋಧ ಪರೀಕ್ಷೆಗಳನ್ನು ಇತರ ಪ್ರಾಂತ್ಯಗಳಿಗೂ ವಿಸ್ತರಿಸಲು ತೀರ್ಮಾನಿಸಲಾಗಿದೆ ಯೆಂದರು.





## ವೈಭವದ ಆನಿವರ ಆಸ್ಥಾನ

ದಕ್ಷಿಣಾಯನದ ಆರಂಭದ ದಿನವನ್ನು ತಿರುಮಲೆಯ ಆಲಯದಲ್ಲಿನ ಆದಾಯ ವೆಚ್ಚಗಳ ಆರಂಭದ ದಿನವೆಂದು ಪರಿಗಣಿಸಿ, ಆ ದಿನವನ್ನು ಉತ್ಸವವನ್ನಾಗಿ ಆಚರಿಸುವುದು ಪ್ರಾಚೀನ ಕಾಲದಿಂದ ನಡೆದು ಬಂದಿದೆ. ಅಂದು ಬೆಳಗ್ಗೆ ಆಲಯದಲ್ಲಿ ಸ್ವಾಮಿಯ ಓಲಗದಲ್ಲಿ ಲೆಕ್ಕ ಪತ್ರಗಳ ಜಮಾಬಂದಿಯನ್ನು ನಿವೇದಿಸಲಾಗುತ್ತದೆ. ಜುಲೈ ತಿಂಗಳ ಹದಿನಾರರಂದು ಮಂಗಳವಾರ ಶ್ರೀ ವೆಂಕಟೇಶ್ವರಸ್ವಾಮಿಯ ಆಲಯದಲ್ಲಿ ಈ ಬಾರಿಯ ಆನಿವರ ಆಸ್ಥಾನ ಯಶಸ್ವಿಯಾಗಿ ನೆರವೇರಿತು.

ಆನಿವರ ಆಸ್ಥಾನದ ಮೊದಲಿನ ಮಂಗಳವಾರ ಕೋಯಿಲ್ ಆಳ್ವಾರ್ ತಿರುಮಂಜನ ನಡೆದು ಸ್ವಾಮಿ ಗರ್ಭಗುಡಿಯಿಂದ ಶಯನ ಮಂಟಪದ ವರೆಗೆ ಗರುಡಾಳ್ವಾರ್ ಸನ್ನಿಧಿ, ಯೋಗನರಸಿಂಹಸ್ವಾಮಿ ವರದರಾಜಸ್ವಾಮಿ ಸನ್ನಿಧಿ, ಬಕುಳಮಾತೆಯ ಸನ್ನಿಧಿ, ವರಾಹಸ್ವಾಮಿ ಗರ್ಭಗುಡಿಗಳಲ್ಲಿ ಪರಿಮಳಸುಗಂಧಗಳನ್ನು ಹಚ್ಚಿ ಶುಭ್ರಕ್ರಿಯೆಯನ್ನು ನಡೆಸಲಾಯಿತು. ಸ್ವಾಮಿ ಆಲಯದ ಬಂಗಾರದ ಬಾಗಿಲು, ಪ್ರಸಾದಗಳ, ಪಣ್ಯಾರಗಳ ಅರೆಗಳನ್ನು ಪರಿಶುಭ್ರಗೊಳಿಸಲಾಯಿತು.

ಜುಲೈ ಹದಿನಾರರಂದು ಮಂಗಳವಾರ ಬೆಳಗ್ಗೆ ಮಲೆಯಪ್ಪಸ್ವಾಮಿಗೆ ವಿಶೇಷ ಅಲಂಕಾರ ಮಾಡಿ ಬಂಗಾರದ ಬಾಗಿಲ ಬಳಿಯಲ್ಲಿ ಓಲಗಕ್ಕೆ ತರಲಾಯಿತು. ಉಭಯ ತಾಯಾರರೊಡನೆ ಓಲಗ ನಡೆಸಿದ ಸ್ವಾಮಿಗೆ ದೊಂಬಾಯಿನ ಐದು ಟ್ರಸ್ಟ್‌ಗಳು ನೀಡಿದ ಹೊಸ ಕಿರೀಟವನ್ನು ತೊಡಿಸಲಾಗಿದ್ದಿತು. ನೂತನ ವಸ್ತ್ರಧಾರಿ ಸ್ವಾಮಿಗೆ ಆಲಯದ ಆಯವ್ಯಯಗಳನ್ನು ಬಿನ್ನವಿಸಲಾಯಿತು. ಅಂದು ಸಂಜೆ ಪುಷ್ಪಪಲ್ಲಕ್ಕಿಯಲ್ಲಿ ಸ್ವಾಮಿ ರಥಬೀದಿಗಳಲ್ಲಿ ಮೆರವಣಿಗೆಯಲ್ಲಿ ಶ್ರೀದೇವಿ ಭೂದೇವಿಯೊಡನೆ ಆಗಮಿಸಿದಾಗ ಅಸಂಖ್ಯ ಭಕ್ತರು ದಾರಿಯ ಇಕ್ಕೆಲಗಳಲ್ಲಿ ನಿಂತು ಸ್ವಾಮಿಯನ್ನು ಬರಮಾಡಿಕೊಂಡರು. ವಿವಿಧ ವರ್ಣಗಳ, ಸುಮಾರು 2000 ಕಿ.ಲೋ. ಹೂವುಗಳಿಂದ ರಥದ ಆಕಾರದಲ್ಲಿ ಅಲಂಕರಿಸಲಾದ ಪುಷ್ಪಪಲ್ಲಕ್ಕಿ ವಿಶೇಷ ಆಕರ್ಷಣೀಯವಾಗಿದ್ದು, ವಿವಿಧ ವರ್ಣಗಳ ವಿವಿಧಕೃತಿಗಳ ವಿದ್ಯುದ್ದೀಪಗಳ ಮಧ್ಯೆ ವೇದಘೋಷ, ಮಂಗಳವಾದ್ಯಗಳ, ಗೋವಿಂದ ನಾಮ ಭಜನೆಗಳ ನಡುವೆ ಸ್ವಾಮಿಯ ಮೆರವಣಿಗೆ ಅತಿಹೆಚ್ಚು ಮಂದಿಯನ್ನು ಮಂತ್ರಮುಗ್ಧಗೊಳಿಸಿತೆಂದರೆ ಅತಿಶಯವಾಗದು.

ಆನಿವರ ಆಸ್ಥಾನ ಪುಷ್ಪಪಲ್ಲಕ್ಕಿ ಸಂದರ್ಭದಲ್ಲಿ ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ರಮೇಶ್ ಕುಮಾರ್, ಸಂಯುಕ್ತ ಕಾರ್ಯನಿರ್ವಹಣಾಧಿಕಾರಿಗಳಾದ ಶ್ರೀ ಸತ್ಯನಾರಾಯಣರಾವ್ ಶ್ರೀ ಬಾಲಸುಬ್ರಹ್ಮಣ್ಯಂ ಮೊದಲಾದವರು ಭಾಗವಹಿಸಿದ್ದರು.

## ಕಂಪ್ಯೂಟರ್‌ಗಳನ್ನು ಪರಿಶೀಲಿಸಿದ ಅಧ್ಯಕ್ಷರು

ತಿರುಮಲ ತಿರುಪತಿ ದೇವಸ್ಥಾನಗಳ ಧರ್ಮಕರ್ತರ ಮಂಡಳಿಯ ಅಧ್ಯಕ್ಷರಾದ ಶ್ರೀ ರಾಮ್ ಬಾಬು ಅವರು ತಿರುಮಲೆಯಲ್ಲಿ ಯಾತ್ರಿಕ ಭಕ್ತರಿಗೆ ವಸತಿ ಸೌಕರ್ಯ ನೀಡುವ ಕಂಪ್ಯೂಟರ್ ವಿಭಾಗವನ್ನು ಜುಲೈ 28 ರಂದು ಪರಿಶೀಲಿಸಿದರು. ಸ್ವತಃ ತಾವೇ ಕಂಪ್ಯೂಟರನ್ನು ಚಲಾಯಿಸಿ ಅದರ ಸುನಿಶಿತತೆಯನ್ನು ಖಚಿತಪಡಿಸಿಕೊಂಡರು. ಅಧ್ಯಕ್ಷರೊಡನೆ ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ರಮೇಶ್‌ಕುಮಾರ್, ತಿರುಮಲೆಯ ಜೆ.ಇ.ಓ. ಶ್ರೀ ಬಾಲಸುಬ್ರಹ್ಮಣ್ಯಂ, ತಿರುಪತಿಯ ಜೆ.ಇ.ಓ. ಶ್ರೀ ಸತ್ಯನಾರಾಯಣ ರಾವ್ ಅವರುಗಳು ಇದ್ದರು.











## ವಿಜಯವಾಡದಲ್ಲಿ ಭಜನ ಮೇಳ

ವಿಜಯವಾಡದಲ್ಲಿ ಜುಲೈ 20, 21 ರಂದು ಎರಡು ದಿನ ವಿಜಯವಾಡದ ತಿ.ತಿ.ದೇ. ಕಲ್ಯಾಣ ಮಂಟಪದಲ್ಲಿ ತಿ.ತಿ.ದೇ. ಧರ್ಮಪ್ರಚಾರ ಪರಿಷತ್‌ನ ವತಿಯಿಂದ ಜಿಲ್ಲಾ ಸ್ಥಾಯಿಯಲ್ಲಿ ಭಜನ ಮೇಳ ನಡೆದು ಯಶಸ್ವಿಯಾಯಿತು. 107 ಭಜನ ಸಂಘಗಳು ಭಾಗವಹಿಸಿದ ಈ ಮೇಳದ ಮೊದಲದಿನ ಮೆರವಣಿಗೆಯಲ್ಲಿ ಭಜನ ಬೃಂದಗಳು ಸಾಮೂಹಿಕ ಭಜನೆ, ಚಿಟಿಗೆ ತಾಳ ಭಜನೆಗಳು, ಕೋಲಾಟಗಳೊಂದಿಗೆ ವಿಜಯವಾಡದ ಪುರವೀಧಿಗಳಲ್ಲಿ ನಡೆದು ಕನಕ ದುರ್ಗಾದೇವಿ ಆಲಯವನ್ನು ಸೇರಿ ಅಮ್ಮನವರನ್ನು ಸಂದರ್ಶಿಸಿದರು. ನಂತರದ ದಿನದ ಭಜನಸ್ಪರ್ಧೆಗಳಲ್ಲಿ 1350 ಭಾಗವಹಿಸಿದ್ದರು ಎಂದು ವರದಿಯಾಗಿದೆ. ಶ್ರೀ ಆಲಪಾಟಿರಾಮರಾವ್, ಶ್ರೀ ಎಂ. ವಿ. ಎಸ್. ಶಾಸ್ತ್ರಿ ಶ್ರೀ ದುರ್ಗೇಶ್ವರರಾವ್ ಮುಂತಾದವರು ಭಜನ ಬೃಂದಗಳನ್ನು ಮುನ್ನಡೆಸಿದರು. ಧರ್ಮಪ್ರಚಾರ ಪರಿಷತ್ ಕಾರ್ಯದರ್ಶಿ ಶ್ರೀ ಸಮುದ್ರಾಲ ಲಕ್ಷ್ಮಣಯ್ಯ ಅವರು ಭಜನಮೇಳವನ್ನು ಯಶಸ್ವಿ ನಿರ್ವಹಿಸಿದರು. ಭಜನ ಬೃಂದಗಳಿಗೆ ತಿ.ತಿ.ದೇ. ಮಾಜಿ ಅಧ್ಯಕ್ಷರು, ಕಾಕತೀಯ ಸಿಮೆಂಟ್ಸ್‌ನ ಅಧಿಪತಿಗಳೂ ಆದ ಶ್ರೀ ವೆಂಕಟೇಶ್ವರ್ಲು ಅವರು ಊಟೋಪಚಾರವನ್ನು ಒದಗಿಸಿದ್ದರು.

## ತಿರುಪತಿಯಲ್ಲಿ ತ್ಯಾಗರಾಜಸ್ವಾಮಿ ಆರಾಧನೋತ್ಸವ

ತಿರುಪತಿಯ ಶ್ರೀ ತ್ಯಾಗರಾಜಸ್ವಾಮಿ ಉತ್ಸವ ಮಿತಿಯು ಜುಲೈ 27 ರಿಂದ ಆಗಷ್ಟ್ ಐದ ವರೆಗೆ ಶ್ರೀ ತ್ಯಾಗರಾಜ ಮಂಟಪದಲ್ಲಿ 54 ನೇ ಾರ್ಷಿಕ ಉತ್ಸವವನ್ನು ಆಚರಿಸಿತು.

ಜುಲೈ 27 ರಂದು ಸಂಜೆ ಖ್ಯಾತ ವಿದ್ವಾಂಸ ಶ್ರೀ ಮ್ಮಂಗುಡಿ ಶ್ರೀನಿವಾಸ ಅಯ್ಯರ್ ಅವರ ಅಧ್ಯಕ್ಷ ುಲ್ಲಿ ಉದ್ಘಾಟಿತವಾದ ಉತ್ಸವಗಳಲ್ಲಿ ತಿ.ತಿ.ದೇ. ರ್ಯನಿರ್ವಹಣಾಧಿಕಾರಿ ಶ್ರೀ ಎನ್. ರಮೇಶ್ ಮಾರ್ ಅವರು ಜ್ಯೋತಿಯನ್ನು ಬೆಳಗಿಸಿದರು. ದ್ರಾಸು ಮ್ಯೂಸಿಕ್ ಅಕಾಡಮಿಯ ಶ್ರೀ ಟಿ.ಟಿ. ಸುಸಮಿತಿಯ ಅಧ್ಯಕ್ಷ ಶ್ರೀ ಕೃಷ್ಣಸ್ವಾಮಿ, ಕಾರ್ಯ ್ ಭೀಮಾಸ್ ರಘು, ಸ್ಥಳೀಯ ಎಂ.ಎಲ್.ಎ. ಮೋಹನ್ ಮೊದಲಾದವರು ಭಾಗವಹಿಸಿದ್ದ ರ್ಯಕ್ರಮದಲ್ಲಿ ತಿ.ತಿ.ದೇ. ಪರವಾಗಿ ಸಮಿತಿಯ ತ ಕಟ್ಟಡಕ್ಕಾಗಿ 4 ಲಕ್ಷರೂಗಳ ವಿರಾಳವನ್ನು ರ್ಯನಿರ್ವಹಣಾಧಿಕಾರಿ ಶ್ರೀ ಎನ್. ರಮೇಶ್‌ಕು ಾರ್ ಅವರು ಡಾ|| ಚೆಲಿಕಾನಿ ಅನ್ನಾರಾವ್ ಅವ ನೀಡಿದರು. 'ಸಂಗೀತ ಪರಂಪರೆಯಿಂದ ಬಂದ ಆಸ್ತಿಯಾಗಿದೆ ಅದನ್ನು ಉಳಿಸಿ ಬೆಳೆಸುವ ಹೊಣೆ ಗಾರಿಕೆ ನಮ್ಮೆಲ್ಲರ ಮೇಲಿದೆ' ಎಂದು ಕಾರ್ಯನಿರ್ವ ಹಣಾಧಿಕಾರಿಯವರು ನುಡಿದಯುತ್ತ ಡಾ|| ಶೆಮ್ಮಂ ಗುಡಿ ಶ್ರೀನಿವಾಸ ಅಯ್ಯರ್ ಅವರನ್ನು ಸನ್ಮಾನಿಸಿ ದರು. ಶ್ರೀ ಟಿ. ಟಿ. ವಾಸು ಹಾಗೂ ಶ್ರೀ ಮೋಹನ್ ಅವರನ್ನು ಸನ್ಮಾನಿಸಲಾಯಿತು.

ತದನಂತರವಾಗಿ ದಿನವೂ ಬೆಳಗ್ಗೆ ಹೊತ್ತಿನಲ್ಲಿ ಪ್ರಖ್ಯಾತ ವಿದ್ವಾಂಸರು ವಿಮರ್ಶಕರು ಸಂಗೀತದ ಒಂದೊಂದು ಅಂಶದ ಬಗ್ಗೆ ಉಪನ್ಯಾಸ, ಉದಾಹ ರಣ ಪ್ರಯೋಗಗಳನ್ನು ನೀಡಿದರು. ಸಂಜೆಯ ಹೊತ್ತಿನಲ್ಲಿ ಸಂಗೀತ, ನೃತ್ಯ ಸಭೆಗಳು ನಡೆದವು.

ಆಗಷ್ಟ್ 5 ರಂದು ಭಾರತದ ಮುಖ್ಯ ಚುನಾ ವಣಾಧಿಕಾರಿ ಶ್ರೀ ಟಿ.ಎನ್. ಶೇಷನ್ ಅವರ ಆಧ್ವರ್ಯದಲ್ಲಿ ಖ್ಯಾತ ನೃತ್ಯಗಾರ್ತಿ ಶ್ರೀಮತಿ ಸುಧಾ ರಾಣಿ ರಘುಪತಿ ಅವರಿಗೆ ಸಪ್ತಗಿರಿ ಸಂಗೀತ ವಿದ್ವನ್ಮಣಿ ಬಿರುದು ನೀಡಲಾಯಿತು. ತತ್ಸಂದರ್ಭ ದಲ್ಲಿ ಎಸ್.ವಿ. ವಿಶ್ವವಿದ್ಯಾಲಯದ ಉಪಕುಲ ಪತಿ ಪ್ರಾಚಾರ್ಯ ಶ್ರೀ ರಾಮಮೂರ್ತಿ ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎನ್. ರಮೇಶ್‌ಕು ಮಾರ್ ಮೊದಲಾದವರು ಮಾತನಾಡಿದರು.

ಭಾರತದ ಮುಖ್ಯ ಚುನಾವಣಾಧಿಕಾರಿ ಶ್ರೀ ಟಿ.ಎನ್. ಶೇಷನ್ ಅವರು

ತಿರುಮಲೆಗೆ ಆಗಮಿಸಿ ಸ್ವಾಮಿಯನ್ನು ಆರಾಧಿಸಿದರು.

ತಿ.ತಿ.ದೇ. ಸಂಯುಕ್ತಕಾರ್ಯನಿರ್ವಹಣಾಧಿಕಾರಿ

ಶ್ರೀ ಬಾಲಸುಬ್ರಹ್ಮಣ್ಯಂ ಅವರು ಶ್ರೀಯುತರಿಗೆ ದರ್ಶನಾನಂತರ ಸ್ವಾಮಿ ಪ್ರಸಾದಗಳನ್ನು ನೀಡಿದರು.



## ಹೆಚ್ಚುತ್ತಿರುವ ಭಕ್ತರ ಸಂಖ್ಯೆ

ತಿರುಮಲೆಯ ಸ್ವಾಮಿಯನ್ನು ನೋಡಬರುವ ಭಕ್ತರ ಸಂಖ್ಯೆ ವರ್ಷವರ್ಷವೂ ಹೆಚ್ಚುತ್ತಿರುವುದು ಕಂಡುಬರುತ್ತದೆ. ಇದರಂತೆ ಎರಡು ವರ್ಷದ ಮೊದಲು ರದ್ದಿಯ ದಿನಗಳಲ್ಲಿ ಸಾಧಾರಣ 65 ಸಾವಿರ ಜನರೂ, ಇತರ ದಿನಗಳಲ್ಲಿ 30-35 ಸಾವಿ ರಜನವೂ ಸ್ವಾಮಿಯನ್ನು ಪ್ರತಿನಿತ್ಯ ಸಂದರ್ಶಿಸುತ್ತಿದ್ದರೆ ಪ್ರತಿ ವರ್ಷ ಸುಮಾರು ಆರುಶತಾಂಶ ಹೆಚ್ಚುತ್ತಿರುವಂತೆ ಕಂಡುಬರುತ್ತಿದೆ. ಹೋದ ಡಿಸೆಂಬರಿನಲ್ಲಿ ಧರ್ಮದರ್ಶನಪಡೆದವರು 10, 29, 550, ಜನವರಿಯಲ್ಲಿ 10, 84, 150 ಮಂದಿಯೂ, ಮಾರ್ಚ್ ತಿಂಗಳಿನಲ್ಲಿ 11, 13, 600 ಮಂದಿಯೂ ಆಗಿದ್ದರು. ನಂತರ ಕ್ರಮವಾಗಿ ಹೆಚ್ಚಿ ಜೂನ್ ತಿಂಗಳಿನಲ್ಲಿ 14,23,950 ಮಂದಿ ಧರ್ಮದರ್ಶನ ಪಡೆದರು. ಹೀಗಾಗಿ ಪ್ರಸ್ತುತ ಅಂದಾಜುಗಳಂತೆ ಬ್ರಹ್ಮೋತ್ಸವ ಮೊದಲಾದ ಉತ್ಸವ ದಿನಗಳಲ್ಲಿ ಹೊರತು ಇತರ ರದ್ದಿ ದಿನಗಳಲ್ಲಿ ದಿನಕ್ಕೆ 68 ಸಾವಿರ ಮಂದಿಯೂ, ಸಾಧಾರಣದಿನಗಳಲ್ಲಿ 40 ರಿಂದ 42 ಸಾವಿರಮಂದಿಯೂ ಸ್ವಾಮಿಯನ್ನು ಸಂದರ್ಶಿಸುತ್ತಿದ್ದಾರೆ. ಇದೇ ರೀತಿಯಲ್ಲಿ ಹುಂಡಿ ಆದಾಯವೂ ಹೆಚ್ಚುತ್ತ ಈ ವರ್ಷ 200 ಕೋಟಿ ರೂಪಾಯಿಗಳನ್ನು ದಾಟಿದೆ ಸ್ವಾಮಿಯ ಆದಾಯ.

## ತಿ.ತಿ.ದೇ. ಕಲ್ಯಾಣಮಂಟಪಗಳಲ್ಲಿ ಕೊಠಡಿಗಳ ಬಾಡಿಗೆಯ ಹೆಚ್ಚಳ

ತಿ.ತಿ.ದೇ. ಕಲ್ಯಾಣಮಂಟಪಗಳ ಹಾಗೂ ಸಮಾಚಾರ ಕೇಂದ್ರಗಳಲ್ಲಿನ ಹವಾನಿಯಂತ್ರಿತ ಕೋಣೆಗಳ ಬಾಡಿಗೆಯ ದರಗಳನ್ನು ತಿ.ತಿ.ದೇ. ಧರ್ಮಕರ್ತರ ಮಂಡಳಿಯ ನಿರ್ಧಾರದಂತೆ ಹೆಚ್ಚಿಸಲಾಗಿದೆ. ದೆಹಲಿಯ ಸಮಾಚಾರಕೇಂದ್ರದಲ್ಲಿನ 200 ರೂ. ಬಾಡಿಗೆಯ ಕೋಣೆಯ ಬಾಡಿಗೆ ರೂ. 400 ಕ್ಕೂ ಕುಟುಂಬ ಕೋಣೆಯ 250 ರೂ. ಬಾಡಿಗೆಯನ್ನು 500 ರೂಗಳಿಗೂ, ಹೈದರಾಬಾದಿನಲ್ಲಿನ ಸಿಂಗಲ್ ರೂಂ ಬಾಡಿಗೆಯನ್ನು 150 ರೂಗಳಿಂದ 300 ರೂಗಳ್ಳಿಗೂ, 200 ರೂಗಳ ಕುಟುಂಬ ಕೋಣೆಯ ಬಾಡಿಗೆಯನ್ನು 400 ರೂಗಳಿಗೂ, ಬೆಂಗಳೂರು, ಮದರಾಸುಗಳಲ್ಲಿನ 200 ರೂಗಳ ಬಾಡಿಗೆಯನ್ನು 400 ರೂಗಳಿಗೂ 250 ರೂ ಬಾಡಿಗೆಯನ್ನು 500 ರೂಗಳಿಗೂ ಹೆಚ್ಚಿಸಲಾಗಿದೆ. ಆದರೆ ಬಾಡಿಗೆ ಹೆಚ್ಚು ಗೊಳಿಸಿರುವುದೆಲ್ಲ ಹವಾನಿಯಂತ್ರಿತ ಸೌಲಭ್ಯಹೊಂದಿದ ಕೋಣೆಗಳೇ ಆಗಿದ್ದು, ಸಾಧಾರಣ ಕೋಣೆಗಳ ಬಾಡಿಗೆಯನ್ನು ಹಾಗೇ ಉಳಿಸಿಕೊಳ್ಳಲಾಗಿದೆ.



## ತಿ.ತಿ.ದೇ. ಉದ್ಯೋಗಿಗಳ ಶ್ರಮದಾನ

ಜುಲೈ 24 ರಂದು ತಿ.ತಿ.ದೇ. ಉದ್ಯೋಗಿಗಳು ಶ್ರಮದಾನದಲ್ಲಿ ಉತ್ಸಾಹ, ಆದರ್ಶ ಮನೋಭಾವದಿಂದ ಭಾಗವಹಿಸಿದರು. ತಿರುಪತಿಯ ಚರ್ಚ್ ಬಳಿಯ ಪುರಸಭಾ ಉದ್ಯಾನವನದಲ್ಲಿ ಸೇರಿಹೋಗಿದ್ದ ಕಸವನ್ನು ತೆಗೆದು ನೆಲವನ್ನು ಸಮಗೊಳಿಸುವ ಕಾರ್ಯದಲ್ಲಿ ಭಾಗವಹಿಸಿದ್ದರು. ತಿ.ತಿ.ದೇ. ಕಾರ್ಯನಿರ್ವಹಣಾದಿಕಾರಿ ಶ್ರೀ ಎನ್. ರಮೇಶ್‌ಕುಮಾರ್, ಸಂಯುಕ್ತ ಕಾರ್ಯನಿರ್ವಹಣಾಧಿಕಾರಿ ಶ್ರೀ ಸತ್ಯನಾರಾಯಣ ರಾವ್, ಅರಣ್ಯಾಧಿಕಾರಿ ಶ್ರೀ ಶಂಕರರೆಡ್ಡಿ ಮೊದಲಾದವರು ಈ ಶ್ರಮದಾನದ ನೇತೃತ್ವವಹಿಸಿದ್ದರು. ತಿ.ತಿ.ದೇ. ಉದ್ಯೋಗಿಗಳು, ಉದ್ಯೋಗಿಗಳ ಸಂಘ ಸಮಾಖ್ಯೆಯ ನಾಯಕ ಶ್ರೀ ಎಂ. ಚಂದ್ರಶೇಖರ ನಾಯುಡು ಅವರೊಡನೆ ಭಾಗವಹಿಸಿದ್ದರು.

ತಿರುಮಲೆಯಲ್ಲಿ ಸಂಯುಕ್ತ ಕಾರ್ಯನಿರ್ವಹಣಾಧಿಕಾರಿ ಶ್ರೀ ಬಾಲಸುಬ್ರಹ್ಮಣ್ಯಂ ಅವರ ನೇತೃತ್ವದಲ್ಲಿ ಉದ್ಯೋಗಿಗಳು ತಿರುಮಲೆಯನ್ನು ಪರಿಶುಭ್ರಗೊಳಿಸುವ ಕಾರ್ಯದಲ್ಲಿ ಭಾಗವಹಿಸಿದ್ದರು.



## ತಿರುಮಲೆಯಲ್ಲಿ ಶ್ರೀ ಎಲ್. ಕೆ. ಅಧ್ವಾನಿ

ಜುಲೈ 28 ರಂದು ಶ್ರೀ ವೆಂಕಟೇಶ್ವರಸ್ವಾಮಿಯನ್ನು ದರ್ಶಿಸಲು ಭಾರತೀಯ ಜನತಾಪಾರ್ಟಿಯ ಅಧ್ಯಕ್ಷ ಶ್ರೀ ಲಾಲಕೃಷ್ಣ ಅಧ್ವಾನಿಯವರು ತಿರುಮಲೆಗೆ ಆಗಮಿಸಿ ಸೋಮವಾರ ಬೆಳಗ್ಗೆ ಸ್ವಾಮಿಯನ್ನು ಸಂದರ್ಶಿಸಿ ಆರಾಧಿಸಿದರು. ಆಲಯದ ಬಳಿ ಅ ರನ್ನು ಸ್ವಾಗತಾಧಿಕಾರಿ ಶ್ರೀ ಶ್ರೀನಿವಾಸುಲು, ಆಲಯ ಡೆ.ಇ.ಓ. ಶ್ರೀ ಸುಬ್ರಹ್ಮಣ್ಯಂ ಸ್ವಾಗತಿಸಿ ದರ್ಶನ ಏರ್ಪಾಡು ನೋಡಿಕೊಂಡರು.

ಶ್ರೀ ಎಲ್. ಕೆ. ಅಧ್ವಾನಿಯವರೊಡನೆ ಪ್ರಧಾ ಕಾರ್ಯದರ್ಶಿ ಶ್ರೀ ಎಂ. ವೆಂಕಯ್ಯನಾಯುಡು ಮಹಿಳಾ ವಿಭಾಗ ನಾಯಕಿ ಶ್ರೀಮತಿ ಶಾಂತಾರೆ ಅವರುಗಳು ಸ್ವಾಮಿ ದರ್ಶನದಲ್ಲಿ ಪಾಲುಗೊ ದರು.



## ಪಿ. ಎಚ್. ಡಿ. ಪ್ರಶಸ್ತಿ

ತಿರುಮಲ ತಿರುಪತಿ ದೇವಸ್ಥಾನಗಳ ಆ ರ್ವೇದ ಕಳಾಶಾಲೆಯಲ್ಲಿ ಉಪಪ್ರಾಚಾರ್ಯ ಕೆಲಸ ನಿರ್ವಹಿಸುತ್ತಿರುವ ಶ್ರೀ ಜಿ. ರಾಮಮೋ ನರಾವು ಅವರಿಗೆ 'ಬಸವರಾಜೀಯಂ - ರಸ ಭೈಷಜ್ಯಕಲ್ಪನೆ' - ಒಂದು ಪರಿಶೀಲನೆ - ಎಂಬ ಯದಲ್ಲಿ ಯಶಸ್ವಿ ಪರಿಶೋಧನಾ ಪ್ರಬಂಧ ಗಾಗಿ, ರಾಜಾಸ್ಥಾನ ವಿಶ್ವವಿದ್ಯಾನಿಲಯ ಡಾಕ್ಟರೆ ಪ್ರಶಸ್ತಿಯನ್ನು ನೀಡಿದೆ.

## ಯಾತ್ರಿಕ ತಂಗುದಾಣ ನಿರ್ಮಾಣಕ್ಕೆ ದಾನ

ಹೊಸದೆಹಲಿಯ ಓಸ್ವಾಲ್ ರಸಾಯನ ಹ ಗೊಬ್ಬರಗಳ ಉದ್ಯಮಪತಿ ಶ್ರೀ ಅಭಯ ಓ ಅವರು ಇದೇ ಜುಲೈ 6-7 ರಂದು ತಿರುಪ ಬಂದಾಗ ಯಾತ್ರಿಕರ ತಂಗುದಾಣ ನಿ ಕ್ಕೆಂದು 31 ಲಕ್ಷ ರೂಪಾಯಿಗಳ ದಾನ ನೀಡಿ ಈ ತಂಗುದಾಣದ ನಿರ್ಮಾಣ ಕಾರ್ಯ ಅತಿ ದಲ್ಲಿಯೇ ಆರಂಭವಾಗಿ, 1-1-97 ರ ಹೊ ಹೊಸವರ್ಷದ ಸಂದಣೆಯನ್ನು ಸ್ವಾಗತಿಸಲು ವಾಗುವುದೆನ್ನಲಾಗಿದೆ.

## ಧರ್ಮಕರ್ತರ ಮಂಡಳಿಯ ತೀರ್ಮಾನಗಳು

ಸರ್ವೋಚ್ಚನ್ಯಾಯಾಲಯ ಮಿರಾಶಿ ವ್ಯವಸ್ಥೆಯನ್ನು ರದ್ದುಗೊಳಿಸುತ್ತ ನೀಡಿದ ಕಾರ್ಪಸ್ ಫಂಡ್ ಏರ್ಪಾಟಿನ ಬಗೆಗಿನ ನಿರ್ದೇಶನದಂತೆ ತಿ. ತಿ. ದೇವಸ್ಥಾನಗಳ ಪಾಲಿನ 20 ಕೋಟಿ ರೂಪಾಯಿಗಳನ್ನು ಜಮಮಾಡಲು ತೀರ್ಮಾನಿಸಲಾಗಿದೆ.

ಚಿತ್ತೂರು ಜಿಲ್ಲೆಯ ಕೀಲಪಟ್ಟ ಗ್ರಾಮದ ಶ್ರೀ ಕೋನೇಟಿರಾಯ ಸ್ವಾಮಿ ಆಲಯದ ರಾಜಗೋಪುರ ನಿರ್ಮಾಣಕ್ಕೆ ವಿಶೇಷ ವಿರಾಳವಾಗಿ 20 ಲಕ್ಷ ರೂಪಾಯಿಗಳನ್ನು ಮಂಜೂರು ಮಾಡಲು ತೀರ್ಮಾನಿಸಲಾಯಿತು.

ನೇಪಾಳದಲ್ಲಿ ತಿ.ತಿ.ದೇ. ಸತ್ರನಿರ್ಮಾಣಕ್ಕಾಗಿ 20 ಲಕ್ಷ ರೂಗಳನ್ನು ನೀಡಲು ತೀರ್ಮಾನಿಸಲಾಗಿದೆ.

ಎರಡನೆಯ ಘಾಟ್‌ರಸ್ತೆಯ ವಿನಾಯಕ ಸ್ವಾಮಿ ಆಲಯದಲ್ಲಿ ಪೂಜೆಗಳನ್ನು ನಿರ್ವಹಿಸಲು ದ್ವಿಚಕ್ರವಾಹನಗಳಿಗೆ 25 ರೂಪಾಯಿ, ಹಾಗೂ ಇತರ ವಾಹನಗಳಿಗೆ50 ರೂಪಾಯಿ ಟಿಕೆಟ್ ಪ್ರವೇಶಗೊಳಿಸಲು ತೀರ್ಮಾನಿಸಲಾಗಿದೆ.

ತಿ.ತಿ.ದೇ. ಸಮಾಚಾರ ಕೇಂದ್ರವಿರುವ ಎಲ್ಲ ಜಿಲ್ಲೆಗಳಿಂದಲೂ ತಿರುಮಲೆಯ ವಸತಿಯನ್ನು ರಿಸರ್ವ್ ಮಾಡಿಸುವ ಏರ್ಪಾಡು ಕಲ್ಪಿಸಲು ತೀರ್ಮಾನಿಸಲಾಗಿದೆ. ಇವರಂತೆ ಪ್ರತಿಜಿಲ್ಲೆಗೂ ಹತ್ತು ಕಾಟೇಜು ಮಾಸಲಾತಿ ಸೌಲಭ್ಯ ದೊರೆತು ಒಟ್ಟು 260 ಕಾಟೇಜುಗಳನ್ನು ಈ ರೀತಿಯಲ್ಲಿ ರಿಸರ್ವ್ ಮಾಡಲು ಅವಕಾಶವಾಗುವುದು. (ಇದುವರೆಗೆ ಈ ಸೌಲಭ್ಯ ಬೆಂಗಳೂರು, ಮದರಾಸು, ದೆಹಲಿಗಳಲ್ಲಿ ಮಾತ್ರ ಇದ್ದಿತು.)

ಆಂಧ್ರಪ್ರದೇಶದ ಎಲ್ಲಾ ದೇವಾಲಯಗಳಲ್ಲೂ ತಿರುಮಲೆಯ ಆಲಯ ಚರಿತ್ರೆಯ ಬಗ್ಗೆ ತಿಳಿಸುವ ಒಂದು ಕಿರುಪುಸ್ತಿಕೆಯನ್ನು ತಯಾರಿಸಿಡಲು ತೀರ್ಮಾನಿಸಲಾಯಿತು.

ಕಂಪ್ಯೂಟರ್ ಮೂಲಕ ಲಾಡು ಟೋಕನ್‌ಗಳು, ಕಾಟೇಜು ರಿಪೇರಿ ವಿವರಗಳನ್ನು ನಿರ್ವಹಿಸಲು ತೀರ್ಮಾನಿಸಲಾಯಿತು.

ತಿರುಮಲೆಯ ಆಯಕಟ್ಟಿನ ಸ್ಥಳಗಳಲ್ಲಿ ಕಂಪ್ಲೇಂಟ್ ಬಾಕ್ಸ್‌ಗಳನ್ನು ಏರ್ಪಾಡುಮಾಡಿ, ಅವುಗಳಲ್ಲಿ ಬರುವ ದೂರು ದೋಷಗಳನ್ನು ಪರಿಹರಿಸಲು ಪ್ರಯತ್ನಿಸಲು ತೀರ್ಮಾನಿಸಲಾಯಿತು.

ತಿರುಮಲೆಯ ಆಲಯದಲ್ಲಿ ಹೆಚ್ಚುತ್ತಿರುವ ಸಂದರ್ಶಕರ ಸಂಖ್ಯೆಯನ್ನು ಗಮನದಲ್ಲಿರಿಸಿಕೊಂಡು, ಆಲಯದ ಒಳಗೆ ಎರಡು ಸರತಿಯಸಾಲು ಒಟ್ಟಿಗೆ ನಡೆಯುವಂತೆ - ಒಂದು ಸಾಲು ತಗ್ಗಿನಲ್ಲಿ ಒಂದು ಸಾಲು ತುಸು ಎತ್ತರದಲ್ಲಿ ನಡೆಯುವಂತೆ - ಏರ್ಪಾಡುಮಾಡಿ ಪ್ರಯೋಗಾತ್ಮಕವಾಗಿ ಪ್ರವೇಶಗೊಳಿಸಿ ಪರಿಶೀಲಿಸಲು ತೀರ್ಮಾನಿಸಲಾಯಿತು.

ಯಾತ್ರಿಕ ಸೌಕರ್ಯಗಳನ್ನು ಉತ್ತಮಗೊಳಿಸಲು ವಿವಿಧ ವಿಷಯಗಳಲ್ಲಿ ಪರಿಶೀಲನೆ ನಡೆಸಿ ವರದಿ ನೀಡಲು ಉಪಸಮಿತಿಗಳನ್ನು ನೇಮಕ ಮಾಡಲಾಯಿತು. ಈ ಉಪಸಮಿತಿಗಳು ಆಗಸ್ಟ್ 7 ರಂದು ಹೈದರಾಬಾದಿನಲ್ಲಿ ನಡೆಯುವ ಮುಂದಿನ ಧರ್ಮಕರ್ತರ ಮಂಡಳಿಯ ಸಮಾವೇಶದಲ್ಲಿ ತಮ್ಮ ವರದಿಗಳನ್ನು ಸಲ್ಲಿಸಬೇಕೆಂದೂ ತೀರ್ಮಾನಿಸಲಾಯಿತು.



## ಮುದ್ರಣಾಲಯಕ್ಕೆ ನೂತನ ಮ್ಯಾನೇಜರ್

ತಿ.ತಿ.ದೇ. ಮುದ್ರಣಾಲಯದ ಮ್ಯಾನೇಜರ್ ಹುದ್ದೆಗೆ ಆಂಧ್ರಪ್ರದೇಶ ಸರ್ಕಾರದಿಂದ ಬದಲಿಯಾದ ಶ್ರೀ ಎಂ. ಲಕ್ಷ್ಮಣರಾವ್ ಅವರು ಮ್ಯಾನೇಜರ್ ಆಗಿ ಕಾರ್ಯಭಾರವನ್ನು ವಹಿಸಿಕೊಂಡಿರುವರು.

ಮುದ್ರಣ ತಂತ್ರದಲ್ಲಿ ಡಿಪ್ಲೋಮಾ ಪಡೆದಿರುವ ಶ್ರೀ ಎಂ. ಲಕ್ಷ್ಮಣರಾವ್ ಅವರು 1969 - 1976 ರವರೆಗೆ ವಿಜಯವಾಡದ ಸಹಕಾರಿ ಪ್ರಕಟಣ - ಮುದ್ರಣ ಸಂಸ್ಥೆಯಲ್ಲಿ ಮ್ಯಾನೇಜರ್ ಆಗಿದ್ದು ನಂತರ ಆಂಧ್ರಪ್ರದೇಶದ ಮುದ್ರಣ ಇಲಾಖೆಯಲ್ಲಿ ಸೇರಿ 1990 ರಲ್ಲಿ ಉಪನಿರ್ದೇಶಕರ ಸ್ಥಾನಕ್ಕೆ ಭಡತಿ ಪಡೆದು, ಅನುಭವಸ್ಥರಾಗಿ 1996 ರ ಆಗಷ್ಟ್ 1 ರಿಂದ ತಿ.ತಿ.ದೇ. ಮುದ್ರಣಾಲಯಕ್ಕೆ ಮ್ಯಾನೇಜರ್ ಆಗಿ ಬಂದಿದ್ದಾರೆ

## ನಿತ್ಯಾನ್ನದಾನಕ್ಕೆ ಐದು ಲಕ್ಷ ರೂಪಾಯಿ ದೇಣಿಗೆ

ತಿರುಮಲೆಯಲ್ಲಿ ಯಾತ್ರಿಕ ಭಕ್ತರಿಗಾಗಿ ನಡೆಯುತ್ತಿರುವ ಶ್ರೀ ವೆಂಕಟೇಶ್ವರ ನಿತ್ಯಾನ್ನದಾನ ಯೋಜನೆಗೆ ಮದರಾಸಿಗೆ ಸೇರಿದ ಶ್ರೀ ಆರ್. ವೀರಮಣಿ ಅವರು ಐದುಲಕ್ಷ ರೂಪಾಯಿಗಳ ದೇಣಿಗೆ ನೀಡಿದ್ದಾರೆ ಎಂದು ತಿರುಮಲೆಯ ಇಂಡಿಯನ್ ಬ್ಯಾಂಕ್ ಶಾಖೆಯ ಮ್ಯಾನೇಜರ್ ಶ್ರೀ ವಿಜಯ ಭಾಸ್ಕರರೆಡ್ಡಿ ಅವರು ತಿಳಿಸಿದ್ದಾರೆ.

## ಸ್ವಾಮಿ ಸಂದರ್ಶನದಲ್ಲಿ ನ್ಯಾಯಶಾಖಾಮಂತ್ರಿ

ಕೇಂದ್ರ ನ್ಯಾಯಶಾಖಾ ಸಹಾಯಮಂತ್ರಿ ಶ್ರೀ ಬಿ.ಬಿ. ರಾಮಯ್ಯ ಅವರು ಜುಲೈ 2 ರಂದು ಮಧ್ಯಾಹ್ನ ತಿರುಮಲೆಗೆ ಆಗಮಿಸಿ ಸ್ವಾಮಿಯನ್ನು ಸಂದರ್ಶಿಸಿದರು. ತಿ.ತಿ.ದೇ. ಸಂಯುಕ್ತ ಕಾರ್ಯನಿರ್ವಹಣಾಧಿಕಾರಿ ಶ್ರೀ ಬಾಲಸುಬ್ರಹ್ಮಣ್ಯಂ ಸ್ವಾಗತಾಧಿಕಾರಿ ಶ್ರೀ ಶ್ರೀನಿವಾಸುಲು ಮತ್ತಿತರರು ಮಂತ್ರಿವರ್ಯರನ್ನು ಸ್ವಾಗತಿಸಿ ಕಲ್ಯಾಣೋತ್ಸವ ಸಮಯದ ಬಿಡುವಿನಲ್ಲಿ ಸ್ವಾಮಿಸಂದರ್ಶನದ ಏರ್ಪಾಡು ಮಾಡಿದರು.



## ತಿರುಮಲೆಯಲ್ಲಿ ಕರ್ನಾಟಕ ಮುಖ್ಯಮಂತ್ರಿ

ತಿರುಪತಿಗೆ ಶನಿವಾರ ಜುಲೈ 27 ರಂದು ಕರ್ನಾಟಕದ ಮುಖ್ಯಮಂತ್ರಿ ಶ್ರೀ ಜೆ. ಎಚ್. ಪಟೇಲ್ ಅವರು ತಮ್ಮ ಕುಟುಂಬ ಸಹಿತ ಆಗಮಿಸಿ ಸ್ವಾಮಿಸೇವೆಯಲ್ಲಿ ಪಾಲುಗೊಂಡರು. ತಿರುಪತಿಯ ವಿಮಾನನಿಲ್ದಾಣದಲ್ಲಿ ಅವರಿಗೆ ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ರಮೇಶ್‌ಕುಮಾರ್ ಘನವಾದ ಸ್ವಾಗತ ಕೋರಿದರು.

ತಿರುಮಲೆಯಲ್ಲಿ ಅವರನ್ನು ತಿ.ತಿ.ದೇ. ಸಂಯುಕ್ತ ಕಾರ್ಯನಿರ್ವಹಣಾಧಿಕಾರಿ ಶ್ರೀ ಬಾಲಸುಬ್ರಹ್ಮಣ್ಯಂ ಮತ್ತಿತರರು ಸ್ವಾಗತಿಸಿದರು. ಆಲಯ ಮರ್ಯಾದೆಯಂತೆ ಅವರನ್ನು ಸ್ವಾಮಿ ಆಲಯಕ್ಕೆ ಸ್ವಾಗತಿಸಿ ಶ್ರೀ ವೆಂಕಟೇಶ್ವರಸ್ವಾಮಿ ಆಲಯಚರಿತ್ರೆ, ವೈಭವವನ್ನು ವಿವರಿಸಿ ತಿಳಿಸಲಾಯಿತು. ಅವರು ಪ್ರಶಾಂತವಾತಾವರಣದ ದಿವ್ಯಸನ್ನಿಧಿಯಲ್ಲಿ ಭಗವತ್ಸೇವೆಯನ್ನು ನಡೆಸಿದರು.

# ಮುಂದಿನ ಸಂಚಿಕೆಯಲ್ಲಿ

### ಸಪ್ತಗಿರಿ

### ಸೆಪ್ಟಂಬರ್ 1996

ಈ ಬಾರಿ ಎರಡು ಬ್ರಹ್ಮೋತ್ಸವಗಳು. ಮೊದಲನೆಯದು ಸೆಪ್ಟಂಬರ್ ತಿಂಗಳಿನಲ್ಲಿ ಹಾಗಾಗಿ ವರ್ಣರಂಜಿತ ಸ್ವಾಮಿಚಿತ್ರ ಪುಟಗಳೊಡನೆ ವೆಂಗಡವನ್ನು ವಾಚಕರ ಬಳಿಗೆ ಕರೆದೊಯ್ಯುವ ಯತ್ನ ಮಾಡಲಾಗಿದೆ. ಈ ದಿಸೆಯ ಲೇಖನಗಳಲ್ಲಿ ಕೆಲವು-

ಪ್ರಸನ್ನ ವೆಂಕಟ ದಾಸರಿಗೆ ಸ್ಫೂರ್ತಿಯಾದ ತಿರುಮಲೆ : ಪ್ರಸನ್ನ ವೆಂಕಟದಾಸರ ಬಗ್ಗೆ ವಿವರವಾಗಿ ಬರೆದು ಖ್ಯಾತರಾಗಿರುವ ಬೆಂಗಳೂರಿನ ಆದ್ಯ ರಾಮಾಚಾರ್ಯರು ಬರೆದಿರುವ ಕುತೂಹಲಕಾರಿ ಲೇಖನ.

ದೇಶಿಕರು ದಯಾನಿಧಿ : ಸ್ವಾಮಿಯ ಗಂಟಾವತಾರರೆಂದೇ ವೇದಾಂತದೇಶಿಕರು ಪ್ರಸಿದ್ಧರು. ಅವರ ಕವಿತಾರ್ಕಿಕ ಹಿರಿಮೆ ಅವರು ರಚಿಸಿದ ಸ್ವಾಮಿ ದಯೆಯ ಬಗೆಗಿನ ಶತಕದಲ್ಲಿ ಪರಿಸ್ಫುಟವಾಗಿದೆ. ಅದರ ಪರಿಯನ್ನು ವಿವರಿಸಿದ್ದಾರೆ ಬೆಂಗಳೂರಿನ ಭಕ್ತ ವಿದ್ವಾಂಸ ಸಿ. ಗೋವಿಂದಾಚಾರ್ಯ.

ಮಲೆಯಪ್ಪನಿಗೆ ನಡೆದುಕೊಂಡು ಮಾನ್ಯರಾದವರು : ಪ್ರಾಚಾರ್ಯ ಎಸ್. ಕೆ. ರಾಮಚಂದ್ರರಾವ್ ಅವರು ಸಾಹಿತ್ಯ - ಸಂಶೋಧನ ರಂಗಗಳಲ್ಲಿ ಮಲೆಯಪ್ಪನನ್ನು ಆರಾಧಿಸಿದವರು. ಅವರ 'ತಿರುಪತಿ ತಿಮ್ಮಪ್ಪ'ನಲ್ಲಿ ಸ್ವಾಮಿಯನ್ನು ಆರಾಧಿಸಿದ ಸಾಮಾನ್ಯರ, ಒಡೆಯರ ವಿವರಗಳನ್ನು ಜೋಡಿಸಿ ನೀಡಿದ್ದಾರೆ. ಆ ಭಾಗದ ಉದ್ಧೃತ; ಸಂದರ್ಭೋಚಿತ.

ಜೊತೆಗೇ ಮತ್ತೂ ಹಲವಾರು ಆಸಕ್ತಿದಾಯಕ ಕುತೂಹಲಕಾರಿ ಅಂಶಗಳೊಂದಿಗೆ ಸಿದ್ಧವಾಗುತ್ತಿದೆ.

## ಸೇವಾ ಭಡತಿಗಳು

ತಿರುಮಲ ತಿರುಪತಿ ದೇವಸ್ಥಾನಗಳ ಸಿಬ್ಬಂದಿಯಲ್ಲಿ ಪದವಿ ವಿರಮಣಗಳ ಮೂಲಕ ಏರ್ಪಟ್ಟ ಖಾಲಿ ಸ್ಥಳಗಳನ್ನು ಉದ್ಯೋಗಿಗಳಿಗೆ ಭಡತಿ ನೀಡುವುದರ ಮೂಲಕ ತುಂಬಿಸಲಾಗಿದ್ದು ಅದರಂತೆ - ಶ್ರೀ ಡಿ. ಕೃಷ್ಣಾರೆಡ್ಡಿಯವರನ್ನು ತಿರುಮಲೆಯ ಸ್ವಾಗತಾಧಿಕಾರಿಯಾಗಿ, ಕೆ. ಲಕ್ಷ್ಮೀಪತಿಯವರನ್ನು ಪಂಚಾಯಿತಿ ಎ.ಇ.ಓ. ಆಗಿ, ಶ್ರೀ ಲೋಕನಾಥ ರೆಡ್ಡಿ ಅವರನ್ನು ಸಾರಿಗೆ ಎ.ಇ.ಓ. ಆಗಿ, ಶ್ರೀ ಶ್ರೀನಿವಾಸುಲು ನಾಯುಡು ಹಾಗೂ ಶ್ರೀ ಡಿ. ರಾಮಕೃಷ್ಣಾರೆಡ್ಡಿಯವರನ್ನು ತಿರುಪತಿಯ ಸ್ವಾಗತಾಧಿಕಾರಿಗಳಾಗಿ, ಶ್ರೀ ಸೀತಾಪತಿಯವರನ್ನು ಚೀಫ್ ಇಂಜನೀಯರರ ಪಿ.ಎ. ಆಗಿ, ಶ್ರೀಮತಿ ಗಜಲಕ್ಷ್ಮಿ ಅವರನ್ನು ಡೆ.ಇ.ಓ. ಆಗಿ (ಸ್ಕೀಮ್ಸ್) ಭಡತಿ ನೀಡಲಾಗಿದೆ.

## ಆರ್ಜಿತ ಸೇವಾ ಟಿಕೆಟ್ ಮಾರಾಟದ ಸಮಯ ಪರಿಷ್ಕರಣೆ

ತಿರುಮಲೆಯ ವಿಜಯಾ ಬ್ಯಾಂಕಿನಲ್ಲಿ ಸ್ವಾಮಿ ಆಲಯದ ಆರ್ಜಿತಸೇವೆಯ ಟಿಕೆಟ್‌ಗಳ ಮಾರಾಟದ ಸಮಯವನ್ನು ಯಾತ್ರಿಕರ ಅನುಕೂಲದ ದೃಷ್ಟ್ಯಾ ಬೆಳಗ್ಗೆ ಮಾರಾಟ ಮಾಡುವುದರ ಬದಲಿಗೆ ಬೆಳಗ್ಗೆ 11 ಗಂಟೆಯಿಂದ ಮಾರಾಟ ಮಾಡಲಾಗುತ್ತದೆ. ಇದರಿಂದಾಗಿ ಬೆಳಗಿನ ಜಾವವೇ ಎದ್ದು ಬಂದು ಆರ್ಜಿತ ಸೇವೆಯ ಸರತಿಯ ಸಾಲಿನಲ್ಲಿ ನಿಲ್ಲುವುದು ತಪ್ಪಿದೆ.

Published on behalf of T.T.Devasthanams by N.S. Ramamurthy, M.A., Editor and
Printed at T.T.D. Press by M. Lakshmana Rao, B.A., L.P.T., T.T.D. Press, Tirupati - 517 507

